ಮಿಂಚಿನಬಳ್ಳಿಯ ೩ನೆಯ ವರುಷದ ೪ನೆಯ ಕುಡಿ

# ನಾಡ ಹಾಡುಗಳು

( ರಾಷ್ಟ್ರೀಯ ಗೀತೆಗಳು )



ಸಂಗ್ರಾಹಕರು :

ಬುರ್ಲಿ ಬಿಂದುಮಾಧವ



ಚಾಲುಕ್ಯ ವಿಕ್ರಮ ವರುಷ ೮೬೫

ಬನದ ಹುಣ್ಣಿವೆ

೧೯೪೦



ಸಾದಾ ಪ್ರತಿ ೧-೦-೨ ವಾಚನಾಲಯದ ಪ್ರತಿ ೧-೪-೦

ಮಿಂಚಿನಬಳ್ಳಿಯ ೪ನೆಯ ವರುಷದ
ಮೊದಲನೆಯ ಕುಡಿ



# ಜ್ಞಾನೋಪಾಸನೆ



ಬರೆದವರು:

ಪ್ರೊ. ಬನಹಟ್ಟಿ, ಎಂ. ಎ.

ನಾಗಪೂರ

ಚೈತ್ರ ಪ್ರತಿಪದಿಗೆ—

ಪ್ರಕಾಶಕರು:
ಬಿ. ಜಿ. ಅವಧಾನಿ
ಮಿಂಚಿನಬಳ್ಳಿಯ ಕಾರ್ಯಾಲಯ
ಧಾರವಾಡ

ಮುದ್ರಕರು:
ಕೆ. ಜಿ. ರಾಯದುರ್ಗ
ಮೋಹನ ಮುದ್ರಣಾಲಯ
ಧಾರವಾಡ

# ಮುನ್ನುಡಿ

ಬಹುದಿವಸದ ಬಯಕೆಯು ಇಂದು ಬಯಲಿಗೆ ಬರುತ್ತಲಿದೆ. ೩೦ನೆಯ ಸಾಲಿನಲ್ಲಿ ನಡೆದ ರಾಷ್ಟ್ರೀಯ ಆಂದೋಲನದ ಕಾಲಕ್ಕೆ 'ಕನ್ನಡದಲ್ಲಿ ರಾಷ್ಟ್ರೀಯ ಗೀತೆಗಳುಂಟೇ?' ಎಂದು ಅನೇಕ ಜನ ನನ್ನ ರಾಜಕೀಯ ಮಿತ್ರರ ಅಣಕದ ಪ್ರಶ್ನೆಗೆ 'ಇವೆ. ಇರದೆ ಏನು?' ಎಂದು ಜಟ್ಟನೆ ಉತ್ತರ ಕೊಟ್ಟೆ. ಜೇಲಿನಲ್ಲಿ ಈ ದೃಷ್ಟಿಯಿಂದ ಕನ್ನಡ ಸಾಹಿತ್ಯದ ಕಡೆಗೆ ನೋಡಲು ಉಪಕ್ರಮಿಸಿದೆ; ಅತ್ಯಂತ ಉಜ್ವಲವಾದ ವಿಪುಲವಾದ ರಾಷ್ಟ್ರೀಯ ಗೀತೆಗಳನ್ನು ನಾನು ಕಂಡೆ. ಶಾಂತಕವಿಗಳು, ಎಮ್. ಎನ್. ಕಾಮತ, ಬೇಂದ್ರೆ, ಹೊಯ್ಸಳ, ಕೆ. ವಿ. ಪುಟ್ಟಪ್ಪ, ವಿ. ಸೀ. ಮೊದಲಾದವರ ಕವಿತೆಗಳು ನನಗೆ ಹುಚ್ಚು ಹಿಡಿಸಿದವು. ಆಗಲೆ ಇಂತಹ ಕವಿತೆಗಳ ಸಂಗ್ರಹದ ಹೊತ್ತಿಗೆಯೊಂದು ಕನ್ನಡಿಗರ ಕೈಯಲ್ಲಿ ಕೊಡಬೇಕೆಂದು ಕೊಂಡೆ. ಅದೇ ನಾಡಹಾಡುಗಳ ರೂಪದಿಂದ ಈಗ ವಾಚಕರ ಕೈಯಲ್ಲಿದೆ.

ಸಾಹಿತ್ಯ ಕ್ಷೇತ್ರದಲ್ಲಿ ರಾಷ್ಟ್ರೀಯ ವಾಙ್ಮಯಕ್ಕೆ ಅದರಲ್ಲಿಯೂ ರಾಷ್ಟ್ರೀಯ ಗೀತೆಗಳಿಗೆ ಮಹತ್ವದ ಸ್ಥಾನವುಂಟು. ರಾಷ್ಟ್ರೀಯ ಜೀವನದ ಸಂಗೋಪನವೇ ರಾಷ್ಟ್ರೀಯ ಸಾಹಿತ್ಯದ ಮುಖ್ಯ ಗುರಿಯು. ಇದನ್ನರಿತರೆ, ರಾಷ್ಟ್ರೀಯ ಗೀತೆಗಳ ಬೆಲೆಯು ಎಷ್ಟು ದೊಡ್ಡದೆಂಬುದು ಹೊಳೆಯುವುದು. ರಾಷ್ಟ್ರವು ಸಂಕಟದಲ್ಲಿ ಸಿಕ್ಕಾಗ, ಇಲ್ಲವೆ ರಾಷ್ಟ್ರವು ತನ್ನ ಪ್ರಗತಿಯನ್ನು ಸಾಧಿಸುವ ಸಮಯದಲ್ಲಿ, ಜನಾಂಗದ ಅಂತಃಕರಣದಲ್ಲಿ ಅತ್ಯಂತ ತೀವ್ರತೆಯಿಂದ ಸುಳಿಯುತ್ತಿರುವ ಭಾವನೆಯೇ ರಾಷ್ಟ್ರಗೀತೆಯಾಗಿ ಹೊರಬೀಳುವುದು. ಜನಾಂಗಕ್ಕೆ ಸ್ಫೂರ್ತಿಯನ್ನೀಯುವುದು. ಅದೇ ಕೆಲಕಾಲದ ಮೇಲೆ ಆ ರಾಷ್ಟ್ರಕ್ಕೆ, ತಾರಕಮಂತ್ರವಾಗುವುದು. ಹೀಗೆಯೇ ಜಗತ್ತಿನ ಪ್ರಸಿದ್ಧವಾದ ರಾಷ್ಟ್ರಗಳ ರಾಷ್ಟ್ರಗೀತೆಗಳೆಲ್ಲ ಉದಯವಾದವುಗಳು.

## ಭಾರತೀಯ ರಾಷ್ಟ್ರಗೀತೆಗಳು

ಈ ರಾಷ್ಟ್ರೀಯ ಭಾವನೆಯು ಪಶ್ಚಿಮದಿಂದ ಬಂದುದು ಎಂದು, ಹಲವು ಭಾರತೀಯರಲ್ಲಿ ತಪ್ಪು ಭಾವನೆಯುಂಟು. ಭಾರತವು ಏಕ ರಾಷ್ಟ್ರವು ನಾವು ಭಾರತೀಯರು, ಎಂಬುದು ನಮ್ಮ ಸಂಸ್ಕೃತಿಯ ಜೀವಾಳವು. ಆದುದರಿಂದಲೆ ನಮ್ಮ ನಿತ್ಯ ಸಂಕಲ್ಪದಲ್ಲಿ ರಾಷ್ಟ್ರೀಯ ಭಾವನೆಯು ಅಡಕವಾಗಿದೆ. ನಮ್ಮ ವಾಙ್ಮಯದಲ್ಲಿ ಭಾರತದ ರಾಷ್ಟ್ರಗೀತೆಯೆಂಬ ಹೆಸರಿನಿಂದ ಗೀತೆಗಳು ಇರಲಿಕ್ಕಿಲ್ಲ. ಆದರೆ ಸಾವಿರಾರು ವರ್ಷಗಳ ಪೂರ್ವದಲ್ಲಿಯೇ ಭಾರತೀಯರು ಈ ಬಗೆಯ ಸಾಹಿತ್ಯ ನಿರ್ಮಾಣ ಮಾಡಿ ರಾಷ್ಟ್ರವನ್ನು ಕಟ್ಟಿದ್ದರೆಂಬುದರಲ್ಲಿ ಎಳ್ಳಷ್ಟೂ ಅಸತ್ಯವಿಲ್ಲ. "ಸ್ವಾರಾಜ್ಯಂ, ವೈರಾಜ್ಯಂ, ಪಾರಮೇಷ್ಠ್ಯಂ, ........ ಸಮುದ್ರ ಪರ್ಯಂತಾಯಾ ಏಕರಾಟ ಇತಿ.." ಎಂದು ದಿನಾಲು ನಾವು ಜಪಿಸುವ ಮಂತ್ರಪುಷ್ಪವು ಭಾರತೀಯರ ರಾಷ್ಟ್ರೀಯ ಗೀತೆಯಲ್ಲದೆ ಮತ್ತೇನು? ಇಂತಹ ಅನೇಕ ಉದಾಹರಣೆಗಳನ್ನು ನಾವು ಕೊಡಬಹುದು.

ರಜಪುತರ ಚಾರಣ ಗೀತೆಗಳೂ, ಮರಾಟರ ಶಾಹೀರಗಳೂ, ಕನ್ನಡಿಗರ ಕಂಠೀರವ ನರಸರಾಜ ವಿಜಯ, ಕುಮಾರರಾಮನ ಕಥೆಗಳೂ, ಲಾವಣಿಗಳೂ ಒಂದು ಬಗೆಯಿಂದ ರಾಷ್ಟ್ರೀಯ ಭಾವನೋದ್ದೀಪಿತ ಕಾವ್ಯಗಳೇ!

ಸ್ವಾತಂತ್ರ್ಯೋನ್ಮುಖವಾದ ನವಭಾರತದಲ್ಲಿ ನವಚೈತನ್ಯವು ಸಂಚರಿಸತೊಡಗಿದೆ. ಭಾರತೀಯರ ಅಂತಃಕರಣದಲ್ಲಿಯ ಈ ಶಕ್ತಿಯು ರಾಷ್ಟ್ರದಲ್ಲೆಲ್ಲ ರಾಷ್ಟ್ರೀಯ ಗೀತೆಗಳಾಗಿ ಹೊರಹೊಮ್ಮುತ್ತಲಿದೆ. ಜಾತಿ ಮತ ಪಂಥಗಳನ್ನು ಮೆಟ್ಟಿ, ಏಕರಾಷ್ಟ್ರೀಯತ್ವದ-ಸ್ವಾತಂತ್ರ್ಯದ ಭಾವನೆಯು ಉದ್ದೀಪನಗೊಂಡ ಸುಂದರವಾದ ಚಿತ್ರವನ್ನು ನಾವು ಇಂದು ರಾಷ್ಟ್ರದಲ್ಲಿ ಕಾಣಬಹುದು. ಎಲ್ಲ ಮತೀಯರ-ಇಷ್ಟೇ-ಅಲ್ಲ, ಭಾರತದೊಡನೆ ತಾದಾತ್ಮ್ಯರಾದ ಪರದೇಶೀಯರ ಮುಖದಿಂದ ಕೂಡ ಭಾರತ ರಾಷ್ಟ್ರ ಗೀತೆಗಳು ಹೊರಬೀಳಹತ್ತಿವೆ. ಬಂಕಿಮಚಂದ್ರ, ರವೀಂದ್ರನಾಥ

ಟಾಗೋರ, ಸರೋಜಿನಿ, ಸರಲಾದೇವಿ ಚೌಧರಾಣಿ, ಸಾವರಕರ, ಬಾಪಟ, ಸುಬ್ರಹ್ಮಣ್ಯಮ್ ಭಾರತಿ, ಟಿ. ಎಲ್. ವಾಸ್ವಾನಿ, ಡಾ. ಅನೀಬಿಝೆಂಟ, ಮುಹಮ್ಮದ ಇಕ್ಬಲ, ರಫೀಕ, ಕಝ್ಝುಸ್ಸ, ರಹಿಮುತಯ್ಯುಬಜಿ, ಅಂಡ್ರೂಬ್ಯಜ ಮೊದಲಾದವರ ಭಾರತೀಯ ಗೀತೆಗಳನ್ನು ನಾವು ನೋಡಬಹುದು.

## ಕನ್ನಡ ಭಾರತೀಯ ಗೀತೆಗಳು

ಈ ಮೇಲಿನ ಕವಿಗಳ ಮಾಲಿಕೆಯಲ್ಲಿಯೇ ಸೇರಲರ್ಹರಾದ ಎಷ್ಟೋ ಜನ ಕವಿಗಳು ಕನ್ನಡದಲ್ಲಿ ಇರುವರೆಂಬುದನ್ನು ನಾವು ಮರೆಯಲಾಗದು. ಶ್ರೀ. ಶಾಂತಕವಿ, ಎಂ. ಎನ್. ಕಾಮತ, ಬೇಂದ್ರೆ, ಬೆಟಗೇರಿ, ಕೆ. ವಿ. ಪುಟ್ಟಪ್ಪ, ವಿ. ಸೀ., ಹೊಯ್ಸಳ, ಸಾಲಿ, ಗೋವಿಂದ ಪೈ ಮೊದಲಾದವರ ಅನೇಕ ಭಾರತೀಯ ಗೀತೆಗಳು ಮೇಲಿನ ಭಾರತೀಯ ಕವಿಗಳ ಯಾವ ರಾಷ್ಟ್ರೀಯ ಕಾವ್ಯಕ್ಕೂ ಕಡಿಮೆ ಇಲ್ಲ. ಇಷ್ಟೇ ಅಲ್ಲ, ಕರ್ನಾಟಕದ ಐತಿಹಾಸಿಕ ರಾಷ್ಟ್ರೀಯ ಪರಂಪರೆಯಿಂದ ಹುರಿಗೊಂಡ ಈ ಕವಿಗಳ ಕಾವ್ಯಗಳಲ್ಲಿ ಒಂದು ಬಗೆಯ ಹೊಸ ಬೆಳಕನ್ನು ನಾವು ಕಾಣಬಹುದು. ಸುಪ್ರಸಿದ್ಧ ಕನ್ನಡ ಕವಿಗಳಿಂದ ಮೊದಲುಮಾಡಿ ಸಾಮಾನ್ಯ ಕವಿಗಳವರೆಗೂ ಎಲ್ಲರೂ ರಾಷ್ಟ್ರೀಯ ಗೀತೆ ಹಾಡಿದ್ದನ್ನು ನಾವು ಕಾಣಬಹುದು.

## ರಾಷ್ಟ್ರೀಯ ಗೀತೆಗಳ ಮಹತ್ವ

ಜನತೆಯ ಅಂತಃಕರಣದಲ್ಲಿ ಬಿಂಬಿಸಿದ ರಾಷ್ಟ್ರೀಯ ಭಾವನೆಯನ್ನು ಒಮ್ಮೆ ಕವಿಯು ಶಬ್ದಗಳಿಂದ ವ್ಯಕ್ತಪಡಿಸಿದನೆಂದರೆ, ಅದು ತಲೆಯಿಂದ ತಲೆಗೆ ಸಾಗುವುದು; ಬೆಳೆಯುತ್ತ ಹೋಗುವುದು. ಅದಕ್ಕೆ ಅಳಿವಿಲ್ಲ. ಯಾವ ಶಕ್ತಿಯೂ ಅದನ್ನು ನಷ್ಟಪಡಿಸಲಾರದು. ಆದುದರಿಂದಲೆ ಒಬ್ಬ ಕವಿಯು ರಾಷ್ಟ್ರೀಯಗೀತೆಗಳನ್ನು ರಚಿಸುವ ಸ್ವಾತಂತ್ರ್ಯವಿದ್ದರೆ ನಮಗೆ ಸಾಕು, ಯಾರು ಬೇಕಾದವರು ಆಳಲಿ ಎಂದಿದ್ದಾನೆ. ವಸಂತ ಬರುತ್ತಲೇ ಗಿಡಗಳು ಚಿಗುರುವ, ಕೋಗಿಲೆಗಳು ಉಲಿಯುವ, ನೈಸರ್ಗಿಕ ಶಕ್ತಿಯನ್ನು ಯಾವ ಆಳಿಕೆಯು ನಿಲ್ಲಿಸಬಲ್ಲದು ? ಆದರಂತೆಯೇ ಒಮ್ಮೆ ರಾಷ್ಟ್ರೀಯ ಭಾವನೆಗಳ ಬೀಜಗಳು ಬಿತ್ತಲ್ಪಟ್ಟರೆ ಸಾಕು. ಎಷ್ಟೇ ಆಘಾತವಾದರೂ ಅವು ನಾಶವಾಗದೆ ಅವಕ್ಕೆ ಮತ್ತೆ ಮತ್ತೆ ಅಂಕುರ ಒಡೆಯುತಕ್ಕದ್ದೆ.

ಈ ಸಂಗ್ರಹದ ವಿಷಯಕ್ಕೆ ಒಂದೆರಡು ಮಾತುಗಳನ್ನು ಹೇಳಿ ಈ ಬೆಳೆದ ಮುನ್ನುಡಿಯನ್ನು ಮುಗಿಸುತ್ತೇನೆ. ಸ್ವತಂತ್ರ ಭಾರತದೊಡನೆಯೇ ಸ್ವತಂತ್ರ ಕರ್ನಾಟಕಪ್ರಾಂತವೂ ನಿರ್ಮಾಣವಾಗಬೇಕೆಂಬ ಪ್ರೇರಣೆಯಿಂದ ಪ್ರೇರಿತರಾಗಿ, ತಮ್ಮ ನಾಡು-ನುಡಿಗಳ ಬಗ್ಗೆಯೂ, ತಾವು ಕನ್ನಡಿಗರಾದರೂ ತಾವು ಮೊದಲು ಭಾರತೀಯರೆಂಬ ಅರಿವಿನಿಂದ ಭಾರತದ ರಾಷ್ಟ್ರೀಯತೆಯ ವಿಷಯವಾಗಿಯೂ ಅಖಿಲ ಮಾನವ ಜನಾಂಗದ ಬಗ್ಗೆಯೂ ಹಾಡಿದ್ದನ್ನು ನಾವು ನೋಡಬಹುದು. ಒಮ್ಮೆ ಅಚ್ಚ ಕನ್ನಡಿಗರಾಗಿ ಇನ್ನೊಮ್ಮೆ ಭಾರತೀಯರಾಗಿ ಮತ್ತೊಮ್ಮೆ ವಿಶ್ವಕುಟುಂಬಿಗಳಾಗಿ ಮಾನವ ಜನಾಂಗದ ಕಲ್ಯಾಣವನ್ನೇ ಚಿಂತಿಸುವ ಕನ್ನಡ ಕವಿಗಳನ್ನು ಈ ಸಂಗ್ರಹದಲ್ಲಿ ನಾವು ನೋಡಬಹುದು.

ಈ ಸಂಗ್ರಹದಲ್ಲಿ ತಮ್ಮ ತಮ್ಮ ಕವನಗಳನ್ನು ಸೇರಿಸಲು ಒಪ್ಪಿಗೆಯನ್ನಿತ್ತ ಕವಿಗಳಿಗೂ, ಮಂಗಳೂರಿನ ಮಿತ್ರಮಂಡಳಿಯವರಿಗೂ, ಪುಸ್ತಕಗಳನ್ನು ಒದಗಿಸಿಕೊಟ್ಟ, ತಮ್ಮ ಸಲಹೆಗಳನ್ನಿತ್ತ ನನ್ನ ಮಿತ್ರರಿಗೂ ನಾನು ಋಣಿಯಾಗಿದ್ದೇನೆ.

ಸಂಕಲ್ಪದಂತೆ ಮೂರು ವರ್ಷ ಮಿಂಚಿನಬಳ್ಳಿಯು ಕನ್ನಡಿಗರ ಸೇವೆಯನ್ನು ಮಾಡಿದೆ. ಅದನ್ನು ಉಳಿಸುವದೂ ಬೆಳೆಸುವದೂ ಕನ್ನಡಿಗರನ್ನೇ ಕೂಡಿದೆ.

ಈ ಗೀತೆಗಳಿಂದ, ತರುಣ ಕನ್ನಡಿಗರು ಹುರಿಗೊಂಡು, ನಾಡುನುಡಿಗಳಿಗಾಗಿ ಟೊಂಕಕಟ್ಟಲೆಂದು ಹಾರೈಸಿ ಈ ಮುನ್ನುಡಿಯನ್ನು ಮುಗಿಸುತ್ತೇನೆ.

ತಮ್ಮ ಸೇವಕ,

**ಬುರ್ಲಿ ಬಿಂದುಮಾಧವ**

# ಪ ರಿ ವಿ ಡಿ



## ಕನ್ನಡ ಹಾಡುಗಳು

**ಕನ್ನಡ ನುಡಿ**



**ಕನ್ನಡತನ**



## ಭಾರತದ ಗೀತೆಗಳು

**ಭಾರತದೇಶ**

## ಭಾರತೀಯತ್ವ

# ವೀರಗೀತೆಗಳು

# ಧ್ವಜಗೀತೆಗಳು

## ಭಾರತ, ಕರ್ನಾಟಕ



# ಭೂಗೀತೆಗಳು



# ರಾಷ್ಟ್ರಗೀತೆಗಳು

# ಮುಡಿಪು



ಕನ್ನಡದ ಹಿರಿಯರಿರ !
ಕನ್ನಡದ ಕಿರಿಯರಿರ !
ಇದುವೆ ನಿಮಗಾಗಿ
ಇದು ನಾಳೆಗಾಗಿ.

ಕನ್ನಡದ ಮಕ್ಕಳಿರ,
ಕನ್ನಡದ ಮರಿಗಳಿರ,
ಕನ್ನಡದ ಈ ಚಿನ್ನ—
ಇದುವೆ ನಿಮಗಾಗಿ
ಇದು ನಾಳೆಗಾಗಿ.

ಕನ್ನಡದ ತುಂಬಿಗಳು
ಪಡುವಲಿನ ತುಂಬಿಗಳು
ಮಧು ಪರಿಚ್ಛೇದಾನುಭವರು
ಸುಮದಿಂದ ಸುಮಗಳಿಗೆ
ರಸದಿಂದ ರಸಗಳಿಗೆ
ಹಿಂಡಾಗಿ ಹಾರಿಹರು ಇವರು.

ಕನ್ನಡದ ಚೆಲುವೆಯರೆ,
ಕನ್ನಡದ ಚೆನ್ನಿಗರೆ,
ಕನ್ನಡದ ಈ ಚಿನ್ನ—
ಇದುವೆ ನಿಮಗಾಗಿ
ಇದು ನಾಳೆಗಾಗಿ.

—"ನಮ್ಮ ಕವಿತೆಗಳು" ಎಂಬ ಕವನಸಂಗ್ರಹದಿಂದ

# ಕನ್ನಡ ನಾಡು

ನಮ್ಮ ಹಿಂದಣ ಸಾಹಿತ್ಯವನ್ನು ನೋಡಿದರೆ ಕನ್ನಡ ಕವಿಗಳಲ್ಲಿ ನಾಡುನುಡಿಗಳ ಅಭಿಮಾನವು ತುಂಬಿ ತುಳುಕುತ್ತದೆ. ‹ ಕೋಗಿಲೆಯಾಗಿ ಪುಟ್ಟುವುದು ನಂದನ ದೊಳ್ ಬನವಾಸಿ ದೇಶದೊಳ್ › ಎಂದು ಪಂಪನು ಹೆಮ್ಮೆಯಿಂದ ಹೇಳಿಕೊಳ್ಳು ವನು. ‘ ಕನ್ನಡವೆಂಬ ನಾಡು ಚೆಲ್ವಾಯ್ತು ’ ಎಂದು ಆಂಡಯ್ಯನು ಅಭಿಮಾನ ದಿಂದ ಹೊಗಳುವನು. ‹ ಕನ್ನಡದ ನಾಡು ವಿರಾಜಿಪುದೆಂತು ಬಣ್ಣಿಪೆಂ › ಎಂದು ಕೊಂಡಾಡುವನು.

‘ಕನ್ನಡವು ಕತ್ತುರಿಯಲ್ತೆ’ ಎಂದು ಇನ್ನೊಬ್ಬನು ನುಡಿಯ ಹೆಮ್ಮೆಯನ್ನು ಹೊಗ ಳುವನು. ಈ ಬಗೆಯಾಗಿ ನಾಡತನ (ರಾಷ್ಟ್ರೀಯತೆಯು) ಕನ್ನಡಿಗರ ಉಸಿರಾಗಿ ದ್ದಿತು. ಆದರೆ ಕನ್ನಡಿಗರ ಸ್ವಾತಂತ್ರ್ಯದೊಡನೆಯೇ ಅದೂ ಮಾಯವಾಯಿತು.

ಕನ್ನಡ ನಾಡು ಇಂದು ಎಚ್ಚತ್ತಿದೆ. ಉದಯೋನ್ಮುಖವಾಗಿದೆ. ನಾಡತನವು ನಾಡಿನಲ್ಲಿ ಹೊರಹೊಮ್ಮ ಹತ್ತಿದೆ. ಇಂದು ಹುಟ್ಟುವ ಕವಿಗಳಿಗೆಲ್ಲ ಕನ್ನಡತನವೇ ಪ್ರೇರಕಶಕ್ತಿಯಾಗಿದೆ.

‘ ಎದ್ದರೆ ಕನ್ನಡ ಕುಳಿತರೆ ಕನ್ನಡ ನುಡಿದರೆ ಕನ್ನಡವು
ಹೃದ್ಯವು ಕನ್ನಡ ಉದ್ಯಮ ಕನ್ನಡ ಕನ್ನಡ-ಕನ್ನಡವು ।
ಕನಸುಮನಸಿನೊಳು ಕನ್ನಡ-ಕನ್ನಡ ನಿದ್ದೆಯು ಕನ್ನಡವು
ತಿಳಿಸು ಕನ್ನಡವು ಜೀವಿತ ಕನ್ನಡ ಎಲ್ಲವು ಕನ್ನಡವು ॥ ’

**—ದಿವಂಗತ ಸಗರ**

ಎಂದು ಕನ್ನಡ ನಾಡು ಕುಣಿಯುತೊಡಗಿದೆ.

‹ ಕನ್ನಡಿಗರಿಗಿಂದೊಂದೇ ಸ್ಮರಣ । ಕನ್ನಡ ನಾಡಿನ ಏಕೀಕರಣ ॥ › ಎಂದು ಜನಜೀವನವು ಹುರಿಗೊಳ್ಳತೊಡಗಿದೆ. ಕನ್ನಡಿಗರ ಆಶೆ--ಆಕಾಂಕ್ಷೆಗಳೇ ರೂಪಗೊಂಡು ಕನ್ನಡ ಕವಿಗಳ ಮುಖದಿಂದ ಕಾವ್ಯವಾಗಿ ಹರಿದುದನ್ನು ಇಲ್ಲಿ ನಾವು ಕಾಣಬಹುದು. (ಬೆಳಗಾವಿ ಕಾಂಗ್ರೆಸ್ಸಿನಲ್ಲಿ ಕನ್ನಡ ಜನಾಂಗವು ‹ಉದಯ- ವಾಗಲಿ ನಮ್ಮ ಚೆಲುವ ಕನ್ನಡನಾಡು› ಎಂಬುದನ್ನು ಕನ್ನಡದ ರಾಷ್ಟ್ರಗೀತೆ ಎಂದು ಒಪ್ಪಿಕೊಂಡಿದೆ.)—

# ಕನ್ನಡದ ತಿರುಳ್

ಕಾವೇರಿಯಿಂದಮಾ ಗೋ-
ದಾವರಿವರಮಿರ್ದ **ನಾಡದಾ ಕನ್ನಡದೊಳ್**
ಭಾವಿಸಿದ ಜನಪದಂ ವಸು-
ಧಾವಳಯವಿಲೀನ ವಿಶದ–ವಿಷಯ ವಿಶೇಷಂ

ಅದರೊಳಗಂ ಕಿಸುವೊಳಲಾ
ವಿದಿತ ಮಹಾಕೊಪಣನಗರದಾ ಪುರಿಗೆರೆಯಾ
ಸದಭಿಸ್ತುತಮಪ್ಪೊಂಕುಂ-
ದದ ನಡುವಣ ನಾಡೆ ನಾಡೆ **ಕನ್ನಡದ ತಿರುಳ್**

ಪದನರಿದು ನುಡಿಯಲುಂ ನುಡಿ-
ದುದನರಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುರಿತೋ-
ದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್

ಕುರಿತವರಲ್ಲದೆ ಮತ್ತಂ
ಪೆರರುಂ ತಂತಂಮ ನುಡಿಯೊಳಿಲ್ಲಂ ಜಾಣರ್
ಕಿರುಮಕ್ಕಳ್ಮಾಮೂಗರು-
ಮರಿಪಲ್ಕರಿವರ್ವಿವೇಕಮಂ ಮಾತುಗಳಂ

ಜಾಣರ್ಕಳಲ್ಲದವರುಂ
ಪೂಣೆಗರರಿಯುದೆಯುಮರಿವವೋಲವಗುಣದಿಂ
ತಾಣಮನಿನಿಸೆಡೆವೆತ್ತೊಡೆ
ಮಾಣದೆ ಪಿಡಿದದನೆ ಕೃತಿಗಳಂ ಕೆಡೆನುಡಿವರ್

—‘ಶ್ರೀಮನ್ನೃಪತುಂಗದೇವ’

# ಬನವಾಸಿ ದೇಶ

ಸೊಗಯಿಸಿ ಬಂದ ಮಾಮರನೆ ತಳ್ತೆಲೆವಳ್ಳಿಯೆ ಪೂತ ಜಾತಿ ಸಂ-
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ಮೊಗಂ
ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋೞ್ಪೊಡಾವ ಬೆ-
ಟ್ಟುಗಳೊಳಮಾವ ನಂದನವನಂಗಳೊಳಂ **ಬನವಾಸಿ ದೇಶದೊಳ್**

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ-
ಳ್ಗಾಗರವಾದ ಮಾನಸರ ಮಾನಸದಂತವರಾಗಿ ಪುಟ್ಟಲೇ-
ನಾಗಿಯುಮೇನೊ ತೀರ್ದಪುದೆ ತೀರದೊಡಂ ಮರಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ **ಬನವಾಸಿ ದೇಶದೊಳ್**

ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ-
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ-
ಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ-
ರಂಕುಸವಿಟ್ಟೊಡಂ ನೆನೆವುದೆನ್ನ ಮನಂ **ಬನವಾಸಿ ದೇಶಮಂ**

ಅಮರ್ದಂ ಮುಕ್ಕುಳಿಪಂತುಟಪ್ಪ ಸುಸಿಲೊಂದಿಂಪಂ ತಗುಳ್ದೊಂದು ಗೇ-
ಯಮುಮಾದಕ್ಕರಗೊಟ್ಟಿಯುಂ ಚದುರರೊಳ್ವಾತುಂ ಕುಳಿರ್ಕೊರ್ಳ್ವ ಜೊಂ
ಪಮುಮೇವೇಳ್ವುದನುಳ್ಳಮೆಯ್ಯುಕಮುಮಿಂತೆನ್ನಂ ಕರಂ ನೋಡಿ ನಾ
ಡೆ ಮನಂಗೊಂಡಿರೆ ತೆಂಕನಾಡ ಮರೆಯಲ್ಕೆನ್ನೇಂ ಮನಂ ಬಕ್ಕರ್ಮೇ !

—ಮಹಾಕವಿ ಶ್ರೀ ಆದಿಪಂಪ

# ಕನ್ನಡಮೆನಿಪ್ಪಾನಾಡು

ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾರನಾ
ನೆಲನಂ ಮತ್ತಿನ ಮಾನಿಸರ್ ಪೊಗಳಲೇನಂ ಬಲ್ಲರೆಂಬೊಂದು ಬ-
ಲ್ಲುಲಿಯಂ ನೆಟ್ಟನೆ ತಾಳ್ದು **ಕನ್ನಡಮೆನಿಪ್ಪಾನಾಡು** ಚೆಲ್ವಾಯ್ತು ಮೆ-
ಲ್ಲೆಲರಿಂ ಪೂತ ಕೊಳಂಗಳಿಂ ಕೆರೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ!

—'ಆಂಡಯ್ಯ'

# ಚಾರುಕರ್ಣಾಟದೇಶಂ

ಜಿನಧರ್ಮಾವಾಸಮಾದತ್ತಮಳವಿನಯದಾಗಾರಮಾದತ್ತು ಪದ್ಮಾ-
ಸನನಿರ್ಮಾಸದ್ಮಮಾದತ್ತತಿವಿಶದಯಶೋಧಾಮಮಾದತ್ತು ವಿದ್ಯಾ-
ಧನಜನ್ಮಸ್ಥಾನಮಾದತ್ತಸಮತರಳಗಂಭೀರಸದ್ಗೇಹಮಾದತ್ತು—
ಎನಿಸಲ್ಕಿಂತುಳ್ಳ ನಾನಾಮಹಿಮೆಯೊಳೆಸೆಗುಂ '**ಚಾರುಕರ್ಣಾಟದೇಶಂ**'!

—ಸೊರಬದ ಶಿಲಾಶಾಸನ (೧೪೦೮)

# ಕನ್ನಡದ ನಾಡು

ಗಾಡಿಯ ಸೀಮೆ, ಚೆಲ್ವೊಗೆವ ತಾಣಮಲಂಪಿನ ಸಂತೆ, ಪೆಂಪು ಸಾ-ರ್ದಾಡುವ ಭೂಮಿ, ಸೌಖ್ಯದೆಡೆ, ಪುಣ್ಯದ ಗೊತ್ತು, ವಿನೋದದಾಗರಂ, ಮೋಡಿಯ ಮಂಟಪಂ, ಸಿರಿಯ ಪೆರ್ಚುಗೆಗೊಳ್ಮನೆ, ಮುಕ್ತಿಕಾಂತೆ ಕೈ-ಗೂಡುವ ಬೀಡು **ಕನ್ನಡದ ನಾಡು** ವಿರಾಜಿಪುದೆಂತು ಬಣ್ಣಿಪೆಂ

—'ಚಿಕ್ಕುಪಾಧ್ಯಾಯ'

# ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು

**ರಾಗ: ಮೋಹನ; ತಾಳ: ಝಂಪೆ**

ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು
ಬದುಕು ಬಲುಹಿನ ನಿಧಿಯು ಸದಭಿಮಾನದ ಗೂಡು ॥ ಪ ॥

ರಾಜನ್ಯರಿಪು ಪರಶುರಾಮನಮ್ಮನ ನಾಡು
ಆ ಜಲಧಿಯನೆ ಜಿಗಿದ ಹನುಮನುದಿಸಿದ ನಾಡು
ಓಜೆಯಿಂ ಮೆರೆದರಸುಗಳ ಸಾಹಸದ ಸೂಡು
ತೇಜವನು ನಮಗೀವ ವೀರವೃಂದದ ಬೀಡು

ಲೆಕ್ಕಿಗ ಮಿತಾಕ್ಷರರು ಬೆಳೆದು ಮೆರೆದಿಹ ನಾಡು
ಜಕ್ಕಣನ ಶಿಲ್ಪಕಲೆಯಚ್ಚರಿಯ ಕರುಗೋಡು
ಚೊಕ್ಕ ಮತಗಳ ಸಾರಿದವರಿಗಿದು ನೆಲೆವೀಡು
ಬೊಕ್ಕಸದ ಕಣಜವೈ ವಿದ್ವತ್ತ್ವಗಳ ಕಾಡು *

ಪಾವನೆಯರಾ ಕೃಷ್ಣೆ ಭೀಮೆಯರ ತಾಯ್ನಾಡು
ಕಾವೇರಿ ಗೋದೆಯರು ಮೈದೊಳೆವ ನಲುನಾಡು
ಆವಗಂ ಸ್ಫೂರ್ತಿಸುವ ಕಬ್ಬಿಗರ ನಡೆಮಾಡು
ಕಾವ ಗದುಗಿನ ವೀರನಾರಾಯಣನ ಬೀಡು

—ಹುಯಿಲಗೋಳ ನಾರಾಯಣರಾಯರು

* ವಿದ್ಯಾರಣ್ಯರು.

# ಎಮ್ಮ ನಾಡವರ್

ಉನ್ನತಿವೆತ್ತ ದೇಶವಿಂದು ಭಾರತವರ್ಷದ ನೂರು ದೇಶದೊಳ್
ಮನ್ನಣೆಯಿಂದೆ ಬಾಳ್ದ ನುಡಿಯೆಮ್ಮಯ ಕನ್ನಡಮಾತು ಭಾವಿಸಲ್
ಚೆನ್ನಿಗರಾಯನೊಲ್ಮೆಯಲಿ ಸುಂದರಕಾವ್ಯ ಸುಶಿಲ್ಪಚಿತ್ರಮಂ
ಮುನ್ನ ನೆಗಳ್ದರಾ ಸದಮಲ ಪ್ರತಿಭಾಂಚಿತರ್ **ಎಮ್ಮ ನಾಡವರ್**

—ಶ್ರೀನಿವಾಸ

## ಕನ್ನಡಿಗರ ತಾಯಿ

ತಾಯೆ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ !
ಹರಸು ತಾಯೆ, ಸುತರ ಕಾಯೆ, ನಮ್ಮ ಜನ್ಮದಾತೆಯೆ !
ನಮ್ಮ ತಪ್ಪನೆನಿತೊ ತಾಳ್ವೆ,
ಅಕ್ಕರೆಯಿಂದೆಮ್ಮನಾಳ್ವೆ;
ನೀನೆ ಕಣಾ ನಮ್ಮ ಬಾಳ್ವೆ,
ನಿನ್ನ ಮರೆಯಲಮ್ಮೆವು—
ತನು ಕನ್ನಡ, ಮನ ಕನ್ನಡ, ನುಡಿ ಕನ್ನಡವೆಮ್ಮವು.

## ಕನ್ನಡಿಗರ ತಾಯಿ

ಹಣ್ಣನೀವ ಕಾಯನೀವ ಪರಿಪರಿಯ ಮರಂಗಳೊ,
ಪತ್ರಮೀವ ಪುಷ್ಪಮೀವ ಲತೆಯ ತರತರಂಗಳೊ,
ತೆನೆಯ ಕೆನೆಯ ಗಾಳಿಯೊ,
ಖಗಮೃಗೋರಗಾಳಿಯೊ,
ನದಿ ನಗರನಗಾಳಿಯೊ !
ಇಲ್ಲಿಲ್ಲದುದುಳಿದುದೆ ?–
ಜೇನು ಸುರಿವ ಹಾಲು ಹರಿವ ದಿವಂ ಭೂಮಿಗಿಳಿದುದೆ ?

ಬುಗರಿಯೀಯೆ ಶಬರಿ ಕಾಯೆ ರಾಮನಿಲ್ಲಿ ಬಂದನೆ ?
ಕನ್ನಡ ದಳ ಕೂಡಿಸಿ ಖಳ ದಶಾಸ್ಯನಂ ಕೊಂದನೆ ?
ಪಾಂಡವರಜ್ಞಾತಮಿದ್ದ,
ವಲಲಂ ಕೀಚಕನ ಗೆದ್ದ,
ಕುರುಕುಲ ಮುಂಗದನಮೆದ್ದ
ನಾಡು ನೋಡಿದಲ್ಲವೇ ?
ನಂದನಂದನನಿಲ್ಲಿಂದ ಸಂದಿಗಯ್ದನಲ್ಲವೇ ?

ಶಕವಿಜೇತಸಮರ ಶಾತವಾಹನಾಖ್ಯನೀ ಶಕಂ
ನಿನ್ನೊಳಂದು ತೊಡಗಿ ಸಂದುದರ್ಧ ಭರತದೇಶಕಂ !
ಚಳುಕ್ಯ ರಾಷ್ಟ್ರಕೂಟರೆಲ್ಲಿ,
ಗಂಗರಾ ಕದಂಬರೆಲ್ಲಿ,
ಹೊಯ್ಸಳ ಕಳಚುರ್ಯರೆಲ್ಲಿ,
ವಿಜಯನಗರ ಭೂಪರು
ಆಳ್ದರಿಲ್ಲಿಯಲ್ಲದೆಲ್ಲಿ ತಾಯೆ ಮೇಣಾಲೂಪರು ?

ಜೈನರಾದ ಪೂಜ್ಯಪಾದ ಕೊಂಡಕುಂದವರ್ಯರ,
ಮಧ್ವಯತಿಯ ಬಸವಪತಿಯ ಮುಖ್ಯಮತಾಚಾರ್ಯರ,
ಶರ್ವ ಪಂಪ ರನ್ನರ,
ಲಕ್ಷ್ಮೀಪತಿ ಜನ್ನರ,
ಷಡಕ್ಷರಿ ಮುದ್ದಣ್ಣರ,
ಪುರಂದರವರೇಣ್ಯರ
ತಾಯೆ, ನಿನ್ನ ಬಸಿರೆ ಹೊನ್ನಗನಿ ವಿದ್ಯಾರಣ್ಯರ!

ಹಳೆಯಬೀಡ ಬೇಲನಾಡ ಮಾಡಮೆನಿತೊ ಸುಂದರಂ!
ಬಿಳಿಯ ಕೊಳದ ಕಾರಕಳದ ನಿಡುಕರೆನಿತೊ ಬಂಧುರಂ!
ಇಲ್ಲಿಲ್ಲದ ಶಿಲ್ಪವಿಲ್ಲ;
ನಿನ್ನ ಕಲ್ಲೆ ನುಡಿವುದಲ್ಲ!
ಹಿಂಗತೆಯಿನಿವಾಲ ಸೊಲ್ಲ
ನೆಮ್ಮ ತೃಷೆಗೆ ದಕ್ಕಿಸು–
ಹೊಸತು ಕಿನ್ನರಿಯಲಿ ನಿನ್ನ ಹಳೆಯ ಹಾಡನುಕ್ಕಿಸು!

ಆರ್ಯರಿಲ್ಲಿ ಬಾರದಲ್ಲಿ ಬಾಸೆ ಎಲ್ಲಿ ಸಕ್ಕದಂ?
ನಿನ್ನ ನುಡಿಯಿನಚ್ಚುಪಡಿಯನಾಂತರೆನಿತೊ ತಕ್ಕುದಂ!
ಎನಿತೊ ಹಳೆಯ ಕಾಲದಿಂದ
ಬರ್ದಿಲವಿಾ ಬಾಸೆಯಿಂದ
ಕಾಲನ ಮೂದಲಿಸಿ ನಿಂದ
ನಿನಗೆ ಮರವೆ ಹೊದೆವುದೆ?
ನಿನ್ನ ನುಡಿಗೆ ನಿನ್ನ ನಡೆಗೆ ಮುದುಪುಮೆಂದುಮೊದೆವುದೆ?

## ಕನ್ನಡಿಗರ ತಾಯಿ

ತನ್ನ ಮರೆಯ ಕಂಪನರಿಯದದನೆ ಹೊರಗೆ ಹುಡುಕುವ
ಮೃಗದ ಸೇಡು ನಮ್ಮ ಪಾಡು ಪರರ ನುಡಿಗೆ ಮಿಡುಕುವ!
ಕನ್ನಡ ಕಸ್ತೂರಿಯನ್ನ
ಹೊಸತುಸಿರಿಂ ತೀಡದನ್ನ
ಸುರಭಿ ಎಲ್ಲಿ? ನೀನದನ್ನ
ನವಶಕ್ತಿಯನೆಬ್ಬಿಸು–
ಹೊಸ ಸುಗಂದದೊಸಗೆಯಿಂದ ಜಗದಿ ಹೆಸರ ಹಬ್ಬಿಸು!

ನಿನ್ನ ಪಡೆಯ ಕತೆಯ ಕಡೆಯ ನುಡಿಯೆ ತಾಳಿಕೋಟೆಯು?
ಕಡಲಿನೊರತೆಗೊಳವೆ ಕೊರತೆ? ಬತ್ತದು ನಿನ್ನೂಟೆಯು!
ಸೋಲ ಗೆಲ್ಲವಾರಿಗಿಲ್ಲ?
ಸೋತು ನೀನೆ ಗೆದ್ದೆಯಲ್ಲ?
ನಿನ್ನನಳಿವು ತಟ್ಟಲೊಲ್ಲ!–
ತಾಳಿಕೋಟೆ ಸಾಸಿರಂ
ಬಾಹುಬಲದಿ ಮನೋಬಲದಿ ತಾಯೆ ಗೆಲುವೆ ಭಾಸುರಂ!

ಕುಗ್ಗದಂತೆ ಹಿಗ್ಗಿಪಂತೆ ನಿನ್ನ ಹೆಸರ ಟೆಕ್ಕೆಯಂ,
ನೀಗದಂತೆ ಸಾಗಿಪಂತೆ ನಿನ್ನ ನುಡಿಯ ಢಕ್ಕೆಯಂ,
ನಮ್ಮೆದೆಯಂ ತಾಯೆ ಬಲಿಸು,
ಎಲ್ಲರ ಬಾಯಲ್ಲಿ ನೆಲಸು,
ನಮ್ಮ ಮನವನೊಂದೆ ಕಲಸು!
ಇದನೊಂದನೆ ಕೋರುವೆ–
ನಿನ್ನ ಮೂರ್ತಿ ಜಗತ್ಕೀರ್ತಿ ಎಂದಿಗೆಮಗೆ ತೋರುವೆ?

—ಮಂ. ಗೋವಿಂದ ಪೈ

# ಕನ್ನಡಂ ದೈವಮೈ

ಕನ್ನಡದ ನೆಲದ ಪುಲ್ಲೆನಗೆ ಪಾವನತುಲಸಿ!
ಕನ್ನಡದ ನೆಲದ ನೀರ್ವೊನಲೆನಗೆ ದೇವನದಿ!
ಕನ್ನಡದ ನೆಲದ ಕಲ್ಲೆನಗೆ ಶಾಲಗ್ರಾಮ ಶಿಲೆ! **ಕನ್ನಡಂ ದೈವಮೈ !**
ಕನ್ನಡದ ಶಬ್ದಮೆನಗೋಂಕಾರಮೀಯೆನ್ನ
ಕನ್ನಡದ ನುಡಿಯೆ ಗಾಯತ್ರಿಯದ್ಭುತಮಂತ್ರ-
ಮಿನ್ನಾವದೈ ಪೆರತು ಕನ್ನಡದ ಸೇವೆಯಿಂದಧಿಕಮೀ ಜಗದೊಳೆನಗೆ?

—ಸಾಲಿ ರಾಮಚಂದ್ರರಾಯ

## ನನ್ನ ಕನ್ನಡನಾಡು

ಹಾಯ ! ಕರ್ನಾಟದಿತಿಹಾಸ ಸನ್ನಭಿಮಾನ
ಹೆಚ್ಚಿಸುವದಕ್ಕೆ ಬೇಕೇ ?
'ತಾಯೆ ತಾಯ್' ಎಂದು ಸಲೆ ಸಿದ್ಧಮಾಡಲು ಬಣಗ
ಒಣ ತರ್ಕಶಾಸ್ತ್ರವೇಕೆ ?

ನನ್ನ ನಾಡಿದು ! ನನ್ನ ಕನ್ನಡದ ನಾಡು !
ನನ್ನೆದೆಗೆ ಸವಿಯಾದ ಹಾಡು !
ನನ್ನ ಕರ್ನಾಟಕವು ನನ್ನ ರಾಜ್ಯವು ನೋಡು,
ನನ್ನ ಸಂತಸದ ಬೀಡು !

ಕರ್ನಾಟಕದ ಧೂಳಿಯಿಂದ ಪಾವನನಾದೆ,
ಹುಟ್ಟಿ ಕರ್ನಾಟದಲ್ಲಿ!
ಕರ್ನಾಟಕದ ಭಾಷೆಯಿಂದ ಭೂಷಿತನಾದೆ
ಬೆಳೆದು ಕರ್ನಾಟದಲ್ಲಿ!

ಕನ್ನಡದ ನಾಡನುಡಿ ಕನ್ನಡದ ನಾಡಸಿರಿ
ಎಲ್ಲಿಯೂ ಜಗದಿ ಕಾಣೆ!
ಕನ್ನಡದ ಕೋಗಿಲೆಯ ಕಮನೀಯ ಗಾನವನು
ಪೇಳುವೆನು ದೇವರಾಣೆ!

ಮುತ್ತಿನಂತಹ ಜೋಳ, ಹವಳದಂತಹ ಗೋದಿ
ತಿಂದು ಸೊಗಸಾದ ತಿನಸು—
ಹೊತ್ತುಹೊತ್ತಿಗೆ ಜೇನಿನಂಥ ತುಪ್ಪವ ಸುರಿದು,
ಮಾಡಿದೆನು ಜೀವ ಸೊಗಸು!

ಉಕ್ಕುಕ್ಕಿಬರುವ ಕಡು ಮಮತೆಯಿಂದಲಿ ತಾಯೆ!
ನಿನ್ನ ಬಡ ಕುವರನಿವನು,
ಚಿಕ್ಕಂದಿನಿಂದ ತೊಳಲುತ್ತ ನಿನ್ನಯ ಪಾದ-
ಪೂಜೆಯನು ಕಟ್ಟುತಿಹನು!

ಹುಟ್ಟಿ ಮುಂಜಾವಿನಿಂದಿದ್ದು ಸಂಜೆಯತನಕ
ಕನ್ನಡದ ನಾಡಿನಲ್ಲಿ
ಕಟ್ಟಿ ಹಾಡುಗಳನ್ನು ನನ್ನ ತಾಯಿಯ ಮೇಲೆ,
ಬಾಡುವೆನು ಕಾಡಿನಲ್ಲಿ!

—ಶ್ರೀಧರ

# ನಾಡವರು

ನಾಡವರು ನಾವು ಕರುನಾಡವರು !
ನಾವು ಹಿರಿನಾಡವರು !     ಪಲ್ಲ.

ಹಿರಿದಾಗಿ ನೋಡುವಾ । ಅರಿದಾಗಿ ಕೂಡುವಾ ।
ಹಿರಿಹಿರಿದನಾಡುವಾ । ಬೆರಗಾಗೆ ಮಾಡುವಾ     ಅ. ಪ.

ಕಳೆದು ಕಾಡಿನ ಕೊಳೆಯ । ಹೊಲ ಬೆಳೆಯ ಹೊಂಗಳೆಯ ।
ಹೊಳೆಸಿ ನಾಡಿನ ತುಂಬ । ನಮ್ಮದೆಮ್ಮದು ಎಂಬ ॥

ಪುಲಿಬಾಯಿ ಹಲವಾಗಿ । ಹೊರ ಒಳದ ಹಗೆ ನುಂಗಿ ।
ಗೆಲವು-ಗುಡಿಯನು ಸೂಸಿ । ಮೆರೆವಳೆಯ ಬನವಾಸಿ ॥

ಸಂಜೆಗೆಂಪಿನ ಸೊಂಪ । ಸಾಮ್ರಾಜ್ಯಗಳ ಪೆಂಪ ।
ಕಾಲಪಟದಲಿ ಬರೆವ । ನೇಸರನ ಮೀರಿಸುವ ॥

ಕೆಳತುಳಿದು ಹುಡಿಯೂಡಿ । ಕೆರಳಿಸಲು, ಹೆಡೆ ಹೂಡಿ ।
ನೆಲ ಮುಗಿಲು ಹಾವಾಗಿ । ನಾಡ ಕಾಯುವ ಚಾಗಿ ॥

ದೇವ ಕಲ್ಪನೆಯ ಕೈ-। ಗಿಣಿಯಾಗಿ ಬಾಳು ಮೈ- ।
ಗೊಳಲೆಂದು ಮತಮತವ । ನಾಡ ತೇರೊಳು ಮೆರೆವ ॥

ಕವಿಯಾಗಿ ಕಲಿಯಲ್ಲಿ । ದೊರೆಯಾಗಿ ಗುರುವಿನಲಿ ।
ಹೆಣ್ಣಿನಲಿ ಹೊಳೆಹೊಳೆವ । ದೇವಿರೂಪವ ತಳೆವ ॥

ವಿಜಯನಗರಗಳಲ್ಲಿ । ಭೋಗದುಕ್ಕನು ಚೆಲ್ಲಿ ।
ಶಾಂತಿ ಶಿಲೆಯಾಗಿರುವ । ಗೊಮ್ಮಟರ ನಿಲ್ಲಿಸುವ ॥

ಕಲ್ಲ ಮೇಣವಗೈದು । ಬೆಟ್ಟ-ಬಸದಿಯಕೊರೆದು ।
ಭೂಕಿರೀಟಗಳೆನಿಪ । ಗುಡಿಗೋಪುರವ ನಿಲಿಪ ॥

ಮನೆಮನೆಯ ದೀಪದೊಲು । ಬೆಳಗಿ ವಚನದ ಸಾಲು ।
ಮುಗಿಲ-ದೀವಿಗೆ ಹೋಲ್ವ । ಕಿರಿಹಾಡು ಕತೆ ಹೇಳ್ವ ॥

ವಿಶ್ವಮಾತೆಗೆ ಮಣಿದು । ಭಾರತಕೆ ಕೈಮುಗಿದು ।
ಹೆತ್ತಾಯಿ ಕನ್ನಡಕೆ । ಬಾಳ ಕಾಣಿಕೆಯೀವ ॥

—ರಂ. ಶ್ರೀ. ಮುಗಳಿ

# ನಿನ್ನ ವಸ್ತುವಂ ನೋಡು

ನಿನ್ನ ವಸ್ತುವಂ ನೋಡು ನೋಡು ॥ ಪಲ್ಲ ॥

ನಿನ್ನ ವಸ್ತುವಂ ನೋಡು ।
ಮಮತೆಯ ಮಾಡು ।
ಸಲೆ ಕಾಪಾಡು ॥ ಗೆಳೆಯಾ ॥ ಅನುಪಲ್ಲ ॥

ನಿನಗದು ಸೌಖ್ಯದ ಬೀಡು ।
ಸುಕೃತಿಗಳೀಡು ।
ಕೀರ್ತಿಯ ಹಾಡು ॥ ಗೆಳೆಯಾ ॥

ಪೂರ್ವಜರುಚ್ಚ ಜ್ಯೋತಿ ।
ಭಾವೀ ನೀತಿ ।
ಜನ್ಮ ವಿಭೂತಿ ॥ ಗೆಳೆಯಾ ॥

ಆತ್ಮಸ್ಫೂರ್ತಿಯ ತೇಜ ।
ಜ್ಞಾನದ ಬೀಜ ।
ಜೀವದ ರಾಜ ॥ ಗೆಳೆಯಾ ॥

ಮೃತ ಸಂಜೀವನ ಸಾರ ।
ಭೃತ್ ಕಾಸಾರ ।
ಸ್ವಂತವಿಹಾರ ॥ ಗೆಳೆಯಾ ॥

ಬರುವದು ಕಳೆ ಮೊಗದಲ್ಲಿ ।
ಧೃತಿ ಮನದಲ್ಲಿ ।
ಬಲ ಮೈಯಲ್ಲಿ ॥ ಗೆಳೆಯಾ ॥

ಪುರುಷಾರ್ಥಂಗಳು ನಾಲ್ಕು ।
ದೊರೆವವು ಸಾಕು ।
ಹೆಚ್ಚೇಂ ಬೇಕು ॥ ಗೆಳೆಯಾ ॥

ಅದು ಕಣ್ಣಿಗೆ ಬಲು ಚಂದ ।
ಹಿತವದರಿಂದ ।
ಸಂಬುಗೆಯಿಂದ ॥ ಗೆಳೆಯಾ ॥

— ಶಾಂತಕವಿ

# ನಾಡಿನ ಹಾಡು

ತಾರೆಗಳು ಮೋಳವಿಸಿ ಬಂದುಬಿಟ್ಟಿಹ ಬೀಡು ನಮ್ಮ ಕನ್ನಡದ ನಾಡು
ತಾರೆಗಳ ಒಡಹುಟ್ಟು, ತಾರೆಗಳ ಒಡನಾಡಿ, ನಮ್ಮ ಕನ್ನಡದ ಹಾಡು.
ಭೂಪತಿಯು ಕವಿಯಾಗಿ ಕವಿಚಮೂಪತಿಯಾಗಿ ಮೆರೆದಿರುವ
ನಮ್ಮ ನಾಡು,
ಪತಿಯಿಲ್ಲದವಳಂತೆ ಗತಿಯಿಲ್ಲದಾಗಿಹುದು, ಹೀನವಾಗಿಹುದು ನೋಡು !
ಧವಲಗಿರಿ ಗಂಗೆಯನು ಆಮಂತ್ರಿಸಲು ನಡೆದ ನಮ್ಮ ಕನ್ನಡದ ತಾಯಿ
ಕಳೆದುಕೊಂಡಿಹಳಿಂದು ಕೃಷ್ಣೆಗಿಹ ಸೌಹಾರ್ದವನ್ನು ಸಹ, ಇಲ್ಲ ಬಾಯಿ!
ಸಾಮ್ರಾಜ್ಯಗಳನಾಳಿ ಮೆಯ್ಯುಂಡ ಕನ್ನಡರು ಹೆಸರಾದ ಸಾಹಸಿಗರು—
ಕೊಳೆಯುತಿಹರಲ್ಲೇನೊ! ಅಲ್ಲಲ್ಲಿ ಈಗಾಗಿ ಹೊರಮನೆಯ ಬಾಣಸಿಗರು!

ಸುಲಿದ ಹಣ್ಣಿನಂತೆ ಮಧುಮಧುರವಾಗಿಹ ನುಡಿಯು
ಸುಲಿದ ಹೆಣ್ಣಿಹುದು ನೋಡು
ಸಲಿಗೆಯನು ಬೆಳೆಸುತ್ತ ಸುಲಿಗೆಯನು ಮಾಡಿದರು
ಕನ್ನಡಕೆ ಬಂತು ಕೇಡು!
ಗ್ರೀಷ್ಮಕಿಹ ಮುಂಬೆಳಗು ಸಹ ತೋರುತಿಹುದೀಗ
ಮುಂಗಾರ ಸಂಜೆಯಂತೆ.
ಭೀಷ್ಮರಂತಹ ಸುತರ ತಾಯಿ ಚಿಂತೆಯಲಿಹಳು ವಿಧವೆಯಿಹ ಬಂಜೆಯಂತೆ.
ಚಿಂತೆಯಾ ಬೆಂತರವು ಬೇಡವ್ವ ನಲ್ದಾಯಿ! ಈ ನಿನ್ನ ಅಧರದಲ್ಲಿ,
ಮುತ್ತೊಂದು ಕಾಣುವುದು ದೇವನಿತ್ತಿಹುದಿಂದು ಮತ್ತೆ ನಿನ್ನುದರದಲ್ಲಿ.
ಬೆಳಗುವುದು ಹೊಸ ಹುಟ್ಟು, ಬರಲಿಹನು ಸುಕುಮಾರ,
ಬರಲಿಹನು ಪರಮ ಪುರುಷ!
ಪುಲಕೇಶಿ ಮಾಧವರ ಬರವಿಸಂತಾದೀತು ಮತ್ತಿನ್ನು ನಿನ್ನ ಹರುಷ!
ಅವನೊಂದು ಹೆಜ್ಜೆಯದು ಬಿಜ್ಜೆ, ಪದ ಸಂಪದವು,
ಇನ್ನೊಂದು ಮುಕ್ತಿಪದವು!
ಒಂದಡಿಯು ಬಿಡುಗಡೆಯು, ಇನ್ನೊಂದು ಹತ್ತುಗಡೆ—ಇಂತಿಹುದು
ಅವನ ಒದವು!
"ಕಣ್ಗೆ ಕಾಮನ ರಕ್ಷೆ, ಬೆನ್ಗೆ ಭೀಮನ ರಕ್ಷೆ, ಮುಂಗೈ ಮುರಾರಿ ರಕ್ಷೆ"
ಎಂದು ಸಂತಸವುಕ್ಕಿ ಒರೆಯುತಿದೆ ಹಾಲಕ್ಕಿ, ಹೇಳುವೆನು ನಿನ್ನ ಸಾಕ್ಷಿ!
ನಿನ್ನ ಬೇಸರ ಬೇನೆ ಬಲು ಹಿರಿದು ನಲ್ದಾಯಿ! ಪಡೆವ ಫಲವದಕು ಹಿರಿದು.
ಬಾಳೋಣ ಏಳಿನ್ನು! ಅರಸಾಗಿ ಆಳೋಣ!
ಮನೆಮುರುಕರನ್ನು ಮುರಿದು!
ನಿನ್ನ ನಗೆಯೇ ಬೆಳ್ಳಿ, ನಿನ್ನ ಮೊಗ ಚಂದ್ರಮನು,
ನಿನ್ನ ಮಗ ಸೂರ್ಯನಿರಲಿ!
ನಿನ್ನವರನುದ್ಧರಿಸಿ ಮನುವಂಶವನು ಹರಸಿ ಬೆಳಗುತಿಹ ಆರ್ಯನಿರಲಿ!

—ವಿನಾಯಕ

# ಕನ್ನಡತಾಯ ನೋಟ

೧

ಹಿರಿಯರಿರ, ಕಿರಿಯರಿರ, ಅಕ್ಕತಂಗಿಯರಾ, ಅಣ್ಣತಮ್ಮದಿರಾ,
ಒಸಗೆನುಡಿ ತಂದಿಹೆನು ನಾನೊಂದ, ತಾಯಿಂದ, ಸಿರಿಯ ತಾಯಿಂದ—
ಕೇಳುವಿರ ಕಿವಿಗೊಟ್ಟು, ತಾಳುವಿರ ಎದೆನೆಟ್ಟು, ತಾಳಿ ಬಾಳುವಿರಾ?
ಕಣ್ಣಾರ ಕಂಡೆನವಳನು—ಕಂಡು, ತಂದಿಹೆನು, ಕೇಳಿ.
ಅವಳೆನ್ನೊಳಾಡಿದುದನಾಡುವೆನು ನಿಮ್ಮಲ್ಲಿ, ಕೇಳಿ.

೨

ಬಳಸಿ ಬಂದೆನು ಸುತ್ತಿ ಕನ್ನಡದ ನಾಡುಂಗಳ ಸಿರಿಯ ನೋಡುತ್ತ,
ತಾಯಡಿಯ ಹುಡಿಯ ತಲೆಗಾನುತ್ತ, ಹರಕೆಯ ಪವಿತ್ರ ಯಾತ್ರೆಯಲಿ.
ಏನು ಚೆಲುವಿನ ನಾಡು! ಚೆಲುವು ಚೆಲ್ಲುವ ನಾಡು! ಕನ್ನಡದ ನಾಡು!
ಏನು ಚಿನ್ನದ ನಾಡು! ನಮ್ಮೊಲುಮೆಯಾ ನಾಡು! ನಮ್ಮಿನಿಯ ನಾಡು!
ಕಾವೇರಿಯಿಂದಮಾ ಗೋದಾವರಿಯ ವರೆಗೆ ಚಾಚಿರುವ ನಾಡು!
ಬಳಸಿದೆನು, ಸುತ್ತಿದೆನು, ಕಣ್ದಣಿಯ ನೋಡಿದೆನು, ಕುಣಿದು ಹಾಡಿದೆನು:
ಕೆಳಗೆ ಬೆಳೆಹೊಲ ಕಪ್ಪು, ಮೇಲೆ ಬಾಂಬೊಲ ಕಪ್ಪು, ಬೆಟ್ಟಗಳು ಕಪ್ಪು,
ಕಾರ್‌ಮೋಡಗಳು ಕಪ್ಪು, ಹೊಳೆ ಕೆರೆಯ ಮಡು ಕಪ್ಪು, ತಾಯ
ಕಾಲ್ ತೊಳೆವ
ಉಪ್ಪು ಕಡಲದು ಕಪ್ಪು, ಜನ ಕಪ್ಪು—ಏನೆಂದೆ? ತಪ್ಪು, ತಪ್ಪು!—
ಮೂಡ ಪಡವಲು ತಿರುಗು, ಬಡಗ ತೆಂಕಲು ತಿರುಗು, ಕರ್-ನಾಟದಲ್ಲಿ,
ನಿಮ್ಮೂರ ಹೆಣ್ಣುಗಳ ಕಣ್-ನೋಟ, ತಣ್-ನೋಟ ಕರ್ಪು, ಬಲು ಕರ್ಪು!
ಕರ್ಪೊ, ಬೆಳ್ಪೋ ಕಾಣೆ, ಕನ್ನಡದ ಕಣ್ನೋಟ—ಕೂರ್ಪು, ಆರ್ಪು!
ಓ ತಾಯೆ, ಕನ್ನಡದ ಪೆರ್-ತಾಯೆ, ನಮ್ಮಮ್ಮ, ದೇವಿ, ಸಮ್ರಾಜ್ಞಿ,
ಸುಳಿಗುರುಳು, ನಗೆಗಣ್ಣು ಏನು ಕಪ್ಪೋ ನಿನಗೆ-ಮುತ್ತಿಡುವ ಕಪ್ಪು!
ನಿನ್ನ ಕಲಿಗಳ ಕೂರ್ಪು, ಕೆಚ್ಚೆದೆಯ ಕಟ್ಟಾಳ ಕೂರ್ಪು, ನೆಚ್ಚಾರ್ಪು,
ಆರು ತಡೆಯಲುಬಹುದು—ಪುಲಕೇಶಿ ಹರ್ಷರೇ ಹೊಯ್ದು ಸಾರುವರು.

ಕರ್ಪಿರಲಿ, ಕೂರ್ಪಿರಲಿ, ನಿನ್ನ ಬೆಳ್ಪಸು ಹೇಳು-ಕೂರಸಿಯ ಮಿಂಚು,
ಕಾರ್-ಮಿಂಚು, ಪೆಣ್ಮಣಿಗಳಾ ಕಣ್ಣ ನುಣ್ಮಿಂಚು, ಆರಿದರಾ
ಕೂರ್-ನೋಟ ಮಿಂಚು !

ಮೆಲ್ಲಮೆಲ್ಲನೆ ತೇಲಿ, ಆಳದಲಿ ಮಲೆಯೆಡೆಯೊಳಲುಗದೆಯೆ ಅಲುಗಿ,
ಕಡಿದು ಬಂಡೆಗೆ ಬಂದು, ನೆಗೆದು ಬೆಳ್ಗಂಗೆಡೆವ ನೀರ್-ಬೀಳ ಬೆಳ್ಪು !
ಕಡೆದ ನೊರೆ, ಚಿಗಿವ ನೊರೆ, ತೂರು ನೊರೆ, ಕುದಿವ ನೊರೆ, ಬೆಳ್ಪಿನೊಳ್
ಬೆಳ್ಪು !

ಆ ಬೆಳ್ಪು, ಆ ತೆಳ್ಪು, ಆ ಮೆಲ್ಪು—ನಿನ್ನ ಮಕ್ಕಳ ಬಾಳಿನೊಳ್ಪು;
ನೀರ್-ಬೀಳ ಬೆಳ್ನೊರೆಯ ಬಿಸಿಲ ಬೆಳ್ದಿಂಗಳಾ ಮಳೆಬಿಲ್ಲ ತಳ್ಪು !
ಬೆಳ್ನೊಳವೊ, ತೀರ್ಥಗಳೊ, ಧರ್ಮಧರ್ಮದ ತಿರುಳೊ, ಪಾಡುವರ ಪುರುಳೊ,
ಒಳ್ಗನ್ನಡದ ಕಲೆಯೊ, ಕುಸುರಿಗೆಲಸದ ಸಿಲೆಯೊ, ಆ ನಯವೊ,
ಮೆರುಗೋ !

ನಿನ್ನ ಚಿಣ್ಣರ ಸೊಬಗೊ, ಬೆಡಗೊ, ಮೆಲ್ಲೆದೆ ತಣ್ಪೊ, ಕೊಡಗೈಯ
ಬಿಣ್ಪೋ !

ಓ ಎನ್ನ ತಾಯಿ, ಕನ್ನಡ ತಾಯಿ, ನಮ್ಮವ್ವ, ದೇವಿ, ಸಮ್ರಾಜ್ಞಿ,
ನಿನ್ನನರಸುತ ಸುಳಿವ, ನೋಂಪಿಯೆನೆ ನಿನ್ನೊಲುಮೆ-ನಾಡನೊಳ-
ಕೊಳುವ,
ನಿನ್ನ ಚೆಲುವನು ಸವಿವ ಮಗುವಾರು ತಣಿಯದನು, ಹಾಡಿ ಕುಣಿಯ
ದನು,
ಭಕ್ತಿಯಲಿ ತಲೆದೂಗಿ ಬಾಗಿ ಮಣಿಯದನು !

೩

ಚೆಲುವು ಕಣೆ ಕಾರ್ವಾರವೆದೆ ತುಂಬಿ, ಗೋಕರ್ಣದಲಿ ಮಿಂದು, ಸಂದು,
ಉಡುಪಿಯಲಿ ಕೃಷ್ಣಂಗೆ ಕೈಮುಗಿದು, ಮಂಗಳೂರಿನ ಹಿರಿಯ
ನಂಟರಲಿ ನಿಂದು,
ಚಾರ್ಮಾಡಿ ಘಾಟಿಯನು ಬಳಬಳಿಸಿ ಮೇಲೇರಿ ಬಂದವನು ಕಂಡೆ, ಕಂಡೆ !

ಮೇಲೆ ತಿಳಿಯಾಕಾಶ, ಸುತ್ತಲೂ ಬೆಟ್ಟ-ಸಾಲ್-ತೋಳ ತೆಕ್ಕೆಯಲಿ
ಕಣಿವೆಯೇರುವ ಕಾಡು, ದಟ್ಟಡವಿ, ಒಮ್ಮೊಮ್ಮೆ ಹಕ್ಕಿಗಳ ಹಾಡು,
ಮರದ ಮರೆಯಲಿ ದುಮುಕುವಬ್ಬಿಗಳ ಹಬ್ಬಿ ಹರಡಿದ ಕೂಗು ಕೊರಲು !
ಕಂಡೆನಾಕೆಯನಲ್ಲಿ, ದೂರದಲಿ, ಕಣ್-ಪುಣ್ಯ ಮಿಂಚಿ ಮರೆಯಾಯ್ತು !
ಕನ್ನಡದ ಆ ನೋಟ, ದೇವಿಯಾ ದರ್ಶನಂ ಪೊಳೆದು ಬಯಲಾಯ್ತು !
ಎವೆಹೊತ್ತಿನಾ ನೋಟ, ಸವಿನೋಟ, ಸವೆಯದೆದೆ-ಚಿಮ್ಮುತಿಹುದಿನ್ನೂ !
ಅಮೃತಲೋಕದ ಮಾತೆ, ಅಳಿಯದಳ್, ಬಾನ್-ಬಾಳ ಪೆರ್ಮೆಗಳ ತಾಯಿ,
ತಲೆಯಲ್ಲಿ ಪೊನ್ನಮುಡಿ, ಪದಿದರಿಲ ಪೆಂಪು, ಬೆಳ್ದಾವರೆಯ ಪೊಂಗಯ್ !
ಸುತ್ತಲುಂ ಪೊನ್ನಾಡ ಕನ್ನಡದ ಪೆರ್ಮಸಡಿಗಳ್, ಸಾವನೊದೆದು ಬೆಳಗಿ
ಕನ್ನಡದ ಮಕ್ಕಳ್ಗೆ ಕನ್ನಡದ ಪಾಲೆರೆದು, ಬಾಳ್ಗೆ ಬಾಳ್ ಪೊಯ್ದು,
ಬಾಳ್ವವರು, ಮೆರೆವವರು,—ಪೆರ್-ನೋಟ ! ಪಿರಿಯ ತಾಯ್,
ಪಿರಿಯ ಮಕ್ಕಳ್ !

ಕಪ್ಪುಹೆಪ್ಪಿನ ಕರುಳ ಕಮರ್ಗಿಲ ಒಸಿರಿಂದ ತೊಟ್ಟನೊಡೆಹೊಮ್ಮಿ,
ಬಾನ ಈ ಕರೆಯಿಂದ ಆ ಕರೆಗೆ ಚಿಮ್ಮಿ, ಒಡನಡುಗುವುದೆ ತೇಜಂ,
ಆ ತೇಜದುರಿಯಂತೆ ಕಣ್ಣುಳ್ಕಿ, ಹೊರಗಡಗಿ, ಒಳಗಿರ್ಪುದಿನ್ನುಂ.
ಇದೊ ಒಂದೆಸೀ ಹಾಳು ಹಂಪೆಗೊಂಡರಸುತ್ತ,—ಒಳಗಿರ್ಪುದಿನ್ನುಂ—
ಒಳಗಿದ್ದು ಹೊರಗಣ್ಗೆ ಕಾಣಿಪುದು ಮತ್ತೊಮ್ಮೆ ಆ ತಾಯ ನೋಟಂ.
ತುಂಗಭದ್ರೆಯ ತಡಿಯ ಚೆದರಿರುವ ಮೊರಡಿಗಳ ಕೊರಕಲಿನ ಬಿಸಿಲ
ಬೇಗುದಿಯ ಬಿರುಕಿನಲಿ ಮುಳ್ಳೆಡೆಯ ಕಲ್ಲುಹೂವಿಡಿದರೆಯ ಮೇಲೆ,
ಕುಳಿತಿದ್ದಳಾ ತಾಯಿ, ಕೈಮೇಲೆ ತಲೆಯೂರಿ, ಅಳಲಿನಾಳದಲಿ !—
' ಯಾರವ್ವ, ನೀ ತಾಯಿ ? ಏತಕಿಂತೊಬ್ಬಳೇ ಕುಳಿತೆ ಕಾಡಿನಲಿ ?
ಏಕೆ ಮೊಗ ಬಾಡಿಹುದು, ಕಂದಿಹುದು, ನೊಂದಿಹುದು, ಕಾಂತಿಗುಂದಿ
ಹುದು ? '

ಕಂಬನಿಗಳೂರುತಿಹ, ಕಳವಳದ, ಕೂರ್ಮೆ ನಡುಗಿಪ ನುಡಿಯ ಕೇಳಿ,
ಕತ್ತೆತ್ತಿ, ಪಳಮೆಯಾಳದ ಕಣ್ಣನೆನ್ನ ಕಣ್ಣಲಿ ನೆಟ್ಟು, ಕಯ್ಯ

ಕುಳ್ಳಿರಲು ಸನ್ನೆಗೈದೀ ಪರಿಯೊಳಾಡಿದಳು, ತೋಡಿದಳು ತೊಳಲ—
ಕಣ್ಣಾರ ಕಂಡುದನು, ತಾಯೆನ್ನೊಳಾಡಿದುದನಾಡುವೆನು, ಕೇಳಿ.

ಕಿವಿಗೊಟ್ಟು ಕೇಳಿ :
ಎದೆಗೊಟ್ಟು ಕೇಳಿ :
ಏಳಿ, ಎಚ್ಚರವಾಗಿ, ಅರಳಿ ಬಾಳಿ !

೪

''ಕೇಳಣ್ಣ, ನಾನೊಬ್ಬ ಹಳೆಯ ಮುತ್ತೈದೆ-ಹಿರಿದಾಗಿ ಬಾಳಿದವಳೊಮ್ಮೆ:
ಈಗ ಬಡತನ, ಬಡವೆ, ಬಡವಾದೆ: ಬಡವಾದ ಮಕ್ಕಳನು ನೋಡಿ,
ಬತ್ತಿ, ಮುತ್ತಿಮ್ಮಡಿಯ ಸೊರಗಿನಲಿ ಬಡವಾದೆ-ಸಾವಿಲ್ಲ ನನಗೆ !
ಸಾವಿಲ್ಲ-ಸಾಯುತಿಹೆ : ಹೊಸ ಮಳೆಗಳಾಗಿ, ನೆಲ ಹೊಸ ಹೊನಲು ಹರಿದು,
ಹೊಸ ಹಮ್ಮು ಹಮ್ಮುತ್ತ, ಎಲ್ಲರೂ ನನ್ನಕ್ಕ ತಂಗಿಯರು—ಚಿಗುರಿ
ಎಲ್ಲರೂ ಚೆಲುವಾದರೆಲ್ಲರೂ ಚಿನ್ನವಾದರು—ನೋಡು, ನೋಡು—
ಆ ಕಡೆಗೆ, ಈ ಕಡೆಗೆ ತೂಗುವರು ತೊನೆಯುವರು, ಆ ಪೊಂಕ, ಬಿಂಕ !
ಪೇರೊಕ್ಕಲಾಗಿ ಪಾಡುವರು;
ಅವರ ಮಕ್ಕಳು ಬೆಳೆದು ಕಳೆಗೂಡಿ ಮುಸಿ ಬೆಳಗಿ ಹಬ್ಬಮಾಡುವರು—
ತಾವ್ ಪೊದಲು ಒದುಕಿ,
ತಾಯ್ ಮೊದಲು ಬದುಕಿ,
ಹೆರರ ಹೊರೆಗಳನಿಳಿಸೆ, ಹೆರರ ಸೆರೆಗಳ ಬಿಡಿಸೆ, ಕಯ್ಯ ನೀಡುವರು.
ಆ ಸಯ್ಪು ಆ ಪುಣ್ಯ, ನನಗಿಲ್ಲ : ನನ್ನ ಮಕ್ಕಳಿಗಿಲ್ಲ ಹಬ್ಬ—
ನನ್ನ ಮಕ್ಕಳಿಗಿಲ್ಲ ಹಬ್ಬ :
ಮಳೆ, ಸುಗ್ಗಿ; ಬೆಳೆ, ಬೆಳಕು; ಹಾಡು, ಹಸೆ; ಕೂಗಾಟ, ಕುಣಿದಾಟ, ಪಾಟ;
ಒಲಿದಾಟ, ನಲಿದಾಟ, ಒಲುಮೆ ಜೀರಾಟ,
ನನ್ನ ಮಕ್ಕಳಿಗಿಲ್ಲ—ನನಗಿಲ್ಲ —ಬಾಳ್ಗೆ ಆ ಅಕ್ಕತಂಗಿಯರು !

ನಮಗಿಲ್ಲ ಬಾಳು.
ಎಲ್ಲರೂ ಬಾಳುವೆಡೆ ನಮಗೆ ಸಾವೆ?
ಎಲ್ಲರೂ ನಲಿವ ಕಡೆ ನಮಗೆ ನೋವೆ?
ಏನು ಕವಿಯಿತೊ ಮಂಕು, ಮಕ್ಕಳಿಗೆ! ಯಾರೆರಚಿದರೊ ಬೂದಿ, ಕಾಣೆ,
ನನ್ನನೊಲ್ಲರು ನನ್ನ ಮಕ್ಕಳೇ! ತಾವ್ ಬಾಳಿ, ತಾಯ ಬಾಳಿಸರು.
ಹೆರರ ನುಡಿ, ಹೆರರ ನಡೆ,–ಹೆರರ ಕೂಗೇ ಕೂಗು; ಹೆರರದೇ ಹೆಮ್ಮೆ!
ನನ್ನ ಮನೆ ಹಾಳು!
ನನ್ನ ನುಡಿ ಬೀಳು!
ನನ್ನ ನಾಡಿನಲಿರುಳು: ನನ್ನ ತೋಟವನಗೆವ, ತೆಂಗಡಕೆಯಿಡುವ,
ತಾವರೆಯ ಕಾಪಿಡುವ, ಮೊಲ್ಲೆ ಮಲ್ಲಿಗೆ ನೆಡುವ, ಆನಂದ ಕೊಡುವ
ಮಕ್ಕಳಿಲ್ಲಿಹರೆನಗೆ–ಹೆರರೊತ್ತೆ ಗಡಿಬಿಡುತ ಹದುಗುತ್ತ, ನುಗ್ಗಿ ಕುಗ್ಗುತ್ತ,
ಹೆರರ ಕೈ ಕಾಯುತ್ತ, ಸಾಯದೆಯೆ ಬದುಕದೆಯೆ ಬಾಳ ನೂಕುವೆನು.'

೫

ಅರಿದೆನರಿದೆನು ಮಾತನಾಡುವಳದಾರೆಂದು: ಕನ್ನಡದ ತಾಯಿ!
ನಮ್ಮ ಕನ್ನಡದ ತಾಯಿ, ತನ್ನ ಹೊಂಬಸಿರಿಂದ ನಮ್ಮನ್ನು ತಂದು,
ನಾವು ಬಿಟ್ಟೊಡೆ ಬಿಡದೆ, ಹಂಬಲಿಸಿ, ಮರುಹುಟ್ಟ ಹಾರೈಸುತಿಹಳು—
ನಾನೆಂದೆ, ಅಳಲನಾರಿಸ ಬಯಸಿ,— 'ಏಕಮ್ಮ, ಇನಿಸೊಂದು ಕೊರಗು?
ಬೇಡಮ್ಮ ಮಕ್ಕಳಲಿ ಇನಿಸೊಂದು ಕಡುಮುನಿಸು—ಬಾರಮ್ಮ, ಹರಸು.
ನಿನ್ನ ನಾಡಿನೊಳದೆಕೊ ಬೆಳಕು ಮೂಡಿಹುದು—ಜೀವ ಕೂಡಿಹುದು.
ನಿನ್ನ ಮಕ್ಕಳು ನಿದ್ದೆಗಳೆದೆದ್ದು ಸಿಂಹದಂತೇಳುತ್ತ, ಮೊಳಗಿ,
ಕಣಕಿಳಿದು ಪಂಪ ನೃಪತುಂಗರಾ ಮಾತುಗಳು ದಿಟವೆನಿಸುತಿಹರು.
ನೆರೆಯನೊಕ್ಕಡೆಗೊಗೆದು, ಬಿಡುಗಡೆಯ ಕೈಕೊಂಡು, ಹಳ ನೆನಪು ನೆನೆದು,
ಹೊಸ ಕಾಣ್ಕೆಗಳ ಕಂಡು, ಸಾಮ್ರಾಜ್ಯಗಳ ಮತ್ತೆ ಕಟ್ಟುತಿಹರು.

ನಿನ್ನ ನಾಡೊಂದಾಗಿ, ನಿನ್ನ ನುಡಿ ಮೇಲಾಗಿ, ಮನೆ ಮಕ್ಕಳೆಲ್ಲ
ಪೇರೊಕ್ಕಲಾಗಿ ಪಾಡುವರು!
ತಾಯ್ ಬದುಕಿ, ತಾವ್ ಬದುಕಿ, ಪೆರರ ಬದುಕಿಪರು!
ಹಾಳು ಹಂಪೆಯ ನಡುವೆ, ನಡುಕಟ್ಟಿ ಮುತ್ತೊಮ್ಮೆ ಮುಡಿಪಾಗಿ ತಾಯ್ಗೆ
ಭಕ್ತಿಯಲಿ ಜೀವವನು ಸಲಿಸುವರು—ಏಳು!
ಸಡಗರದ ಆ ಕೂಗ ಕೇಳು:
ನಾಡು ಸಿಂಗರವಾಯ್ತು, ಬೀಡು ಹಬ್ಬೆಳಕಾಯ್ತು, ಅನೊ ಹಬ್ಬ ಮೆರೆತ!
ಹೆಣ್ಣ ಚೆಲುವನು ನೋಡು-ಗಂಡುಗಲಿಗಳ ನೋಡು-ಕಟ್ಟಾಳುಗಳನು,
ರಾಜರನು, ಋಷಿಗಳನು, ಕವಿಗಳನು, ಧೀರರನು, ಕರ್ಮವೀರರನು—
ಹೊಸತ ಹಳದನು ಮಾಡಿ, ಹಳದ ಹೊಸತನು ಮಾಡಿ, ನಾಡೊಂದು ಮಾಡಿ,
ಧರ್ಮ ಸತ್ಯಗಳಿಂದ, ಪ್ರೇಮ ಶಾಂತಿಗಳಿಂದ, ಸ್ವಾತಂತ್ರ್ಯದಿಂದ,
ಸುಖದಿಂದ, ಸೌಂದರ್ಯದಾನಂದದಿಂದೆಲ್ಲ ಸಮೃದ್ಧಿಯಿಂದ
ಬಾಳರೇ ನೀ ಬಂದು ನಲಿಸಿದೊಡೆ, ಹರಸಿದೊಡೆ—ಬಾ ತಾಯಿ, ಹರಸು.
ತೇರೇರು ಬಾ ತಾಯಿ, ನಿನ್ನ ಸಿಂಹಾಸನವನೇರು ಮುತ್ತೊಮ್ಮೆ.
ಪಳಮೆಯಲಿ ಪೇರಾಲವನು ನೀನು ಬಿತ್ತಲದು ಮೊಳೆತು, ಮರವಾಗಿ,
ಪಡುವ ಮೂಡಲು ತೆಂಕ ಬಡಗಲೆಡೆ ಕೊಂಬೆಗಳನೆಸೆದೆಸದು ಬೀಗಿ,
ಈ ಕೊಂಬೆ ಕರಗಿದೊಡೆ ಆ ಕೊಂಬೆ ಬಿಳಿಲಿಳಿದು ಬೇರೂರಿ ತಾಗಿ
ಒಂದೆ ಮರವಮರವಾಗಿರ್ಪಂತೆ, ಅಮರವಾಗಿನ್ನುಮಿದೆ ಇಹುದು
ನಿನ್ನೊಂದು ಕರ್ನಾಟರತ್ನಸಿಂಹಾಸನಂ—ಬಾಳ್ಗೆ, ಅದು ಬೆಳಗೆ
ಕನ್ನಡದಮುಡಿಯಾಗಿ, ಕನ್ನಡದ ನುಡಿಯಾಗಿ ಕನ್ನಡದ ಬಾಳಕುಡಿಯಾಗಿ!
—ಬಾರಮ್ಮ, ಹರಸು.'

೬

ನಕ್ಕಳಾ ತಾಯಿ.
ಮುದುಕಿ ಎಳೆಯುವಳಾಗಿ, ಮಾಸು ಮಿಂಚೆಳೆಯಾಗಿ ನವೆದ ಮೈ ತುಂಬಿ,
ಕಡಲ ತೆರೆಗಳನುಟ್ಟು, ಬೆಟ್ಟ ಬಯಲನು ತೊಟ್ಟು, ಅರಿಲ ಮುಡಿಗಿಟ್ಟು.

ಮುಗುಳ್-ನಗೆಯ ಸಸುನಕ್ಕಳಾ ತಾಯಿ, ನನ್ನ ತಲೆಯಲಿ ಕಯ್ಯ
ತಾವರೆಯನಿಟ್ಟು
ಸುತ್ತಲುಂ ಕಾಣಿಸಿದರೊಡನೆ—
ಕನ್ನಡದ ಪೊನ್ನಾಡ ಪೆರ್ಮಸಡಿಗಳ್ !
ಸಾವನೊಡೆವಾ ಪಾಲ ಸೂಸು ಕಿಡಿಗಳ್ !
ಹಿಂದೆ ಸೀಡಿದ ಸಾಲು, ಮುಂದೆ ಸೀಡಿದ ಸಾಲು, ಕನ್ನಡದ
ಕರುಳುಗಳು——ಸಡುವೆ, ಸಿರಿ ತಾಯ್.
ಭುವನೇಶ್ವರೀದೇವಿ ರಥವನೇರಿದಳು.
ಕೂಗಿದರು ಎಲ್ಲರೂ ಒಕ್ಕೊರಲ್ !—
‘ ತಾಯ್ ಬಿಜಯಮಾಡುವಳು, ದಾರಿ ಬಿಡಿ, ದಾರಿ ಬಿಡಿ, ಅಡ್ಡಬಾರದಿರಿ;
ಭಾರತಾಂಬೆಯ ಹಿರಿಯ ಹೆಣ್ಮಗಳೆ, ದಾರಿ ತೋರುವ ಹಿರಿಯ ಸೋದರೆ
ಬಾಳಮ್ಮ, ಬಾಳು !
ನೀನ್ ಬಾಳ್ಕೆ, ಎನ್ ಬಾಳು ನಿನ್ನ ಮಕ್ಕಳದು !—ಬಾನ್ ಬಾಳು,
ತಾಯೆ—
ಬಾಳಮ್ಮ, ಬಾಳು! ’

೭

ಚೆಲುವೆಯರ, ಚೆನ್ನಿಗರ, ಹಿರಿಯ ತಾಯ ಮಕ್ಕಳಿರ, ಒಡಹುಟ್ಟಿದವರಾ,
ಒಸಗೆಸುಡಿ ಕೇಳಿದಿರ, ತಾಳಿದಿರ ಎದೆಯಲ್ಲಿ, ತಾಳಿ ಬಾಳುವಿರಾ,
ನಾಡು ನುಡಿ ಸಡೆಗಳನು ಮುನ್ನಡೆಗೆ ನಡಸುತ್ತ, ಮುಂದೆ ಸಾಗುವಿರಾ?
ಭಾರತದ, ಲೋಕದಾ ಮಕ್ಕಳಲಿ ಹಿರಿದಾಗಿ ತೂಕ ತೂಗುವಿರಾ ?
ಬನ್ನಿ, ಓ ಮಕ್ಕಳಿರ,
ಒಕ್ಕೊರಲಲೆಲ್ಲರೂ ಕೂಗಿ ಈ ಒಕ್ಕೂಗ—ಈ ಹಿರಿಯ ಕೂಗ—
‘ ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ, ಸಿರಿಗನ್ನಡಂ ಗೆಲ್ಗೆ, ಬಾಳ್ಗೆ—
ಕನ್ನಡದ ತಾಯ್ ಗೆಲ್ಗೆ, ಬಾಳ್ಗೆ. ’

—ಶ್ರೀ

# ಕೈಬಿಡುತಿದೆ ಕನ್ನಡನಾಡು

( 'ಆ ಮಾಧವನೆಲ್ಲಿರುತಿಹನು' ಎಂಬಂತೆ )

ಕೈಬಿಡುತಿದೆ ಕನ್ನಡನಾಡು ! ಬಾ ಬೇಗ ಮಾಧವನೆ ನೋಡು ಪಲ್ಲ

ನೀನಾಡಿದ ಆಟದ ಮನೆಯು । ತಪವನು ಮಾಡಿದ ವರಗುಹೆಯು ।
ಚಿನ್ನದ ಮಳೆ ಸುರಿದಿಹ ಹೊಲವು । ಆನಂದದೇವಿಯಾಲಯವು ।
ಕನ್ನಡನಾಡಿನ ಅರಮನೆಯು । ವಿಜಯನಗರವೆಂಬೀ ಪುರಿಯು ।
ತೆಲುಗರ ಬಾಯೊಳು ಬೀಳುತಿದೆ ।
ಕನ್ನಡಿಗರ ಮೊಗ ನೋಡುತಿದೆ ।
ನಿನ್ನನು ದೈನ್ಯದಿ ಕರೆಯುತಿದೆ ।
ಕೈಬಿಡುತಿದೆ ಕನ್ನಡನಾಡು । ಬಾ ಬೇಗ ಮಾಧವನೆ ನೋಡು.

## ಕೈಬಿಡುತಿದೆ ಕನ್ನಡನಾಡು

ಹುಕ್ಕಬುಕ್ಕರನ್ನೆಬ್ಬಿಸಿದಿ । ಕನ್ನಡಿಗರ ಹುರಿದುಂಬಿಸಿದಿ ।
ಒಕ್ಕಟ್ಟನು ನೀ ಬೆಳೆಯಿಸಿದಿ । ಶೌರ್ಯದ ಸಾರವ ತೋರಿಸಿದಿ ।
ಒಕ್ಕಟ್ಟಿನಿಂದ ರಕ್ಷಿಸಿದಿ । ಸಿಂಹಾಸನವನು ಸ್ಥಾಪಿಸಿದಿ ।
ಈಗಿನ ಕನ್ನಡಿಗರ ನೋಡು ।
ನಮ್ಮ ಹೇಡಿತನವ ದೂಡು ।
ಹರಿದಿಹ ನಾಡನು ಸರಿಮಾಡು !
ಕೈಬಿಡುತಿದೆ ಕನ್ನಡನಾಡು । ಬಾ ಬೇಗ ಮಾಧವನೆ ನೋಡು.

ಕನ್ನಡಿಗರ ಮೇಲ್ದಯೆದೋರು । ಸ್ವಾತಂತ್ರ್ಯದ ಮಂತ್ರವ ಸಾರು ।
ಕನ್ನಡತನವನು ಗಡ ಬೀರು । ಎಲ್ಲರ ಹೃದಯದಿ ನೀ ಸೇರು ।
ಕನ್ನಡದೇಳ್ಗೆಗೆ ಹರಣವನು । ನೀಡಲು ನೀಡೈ ಬುದ್ಧಿಯನು ।
ಹೆಣಗುತೆ ದೊರಕಿಸಿ ವಿಜಯವನು ।
ಮೆರೆಸಲು ತಾಯ ಪತಾಕೆಯನು ।
ಕೊಡು ಹಿಂಜರಿಯದ ಧೈರ್ಯವನು ।
ಕೈಬಿಡುತಿದೆ ಕನ್ನಡನಾಡು । ಬಾ ಬೇಗ ಮಾಧವನೆ ನೋಡು.

ನಿನ್ನನು ಪಡೆದಿಹುದೀ ನಾಡು । ಮುದ್ದಿಸುತಾಡಿಸಿತೀ ನಾಡು ।
ವಿದ್ಯೆಯ ನಿನಗರುಹಿದ ನಾಡು । ಪುಣ್ಯವ ಮಾಡಿಸಿತೀ ನಾಡು ।
ಮುಕುತಿಯ ತೋರಿಸಿದೀ ನಾಡು । ನಿನ್ನಯ ನನ್ನಿಯ ತಾಯ್ನಾಡು ।
ಬನ್ನದಿ ಸಿಲುಕುತೆ ಬಳಲುತಿರೆ ।
ಇನ್ನೂ ಮರೆಯಲಿ ನಿಲ್ಲುವರೆ? ।
ನಿಲೆ ಕನ್ನಡಿಗರು ಏಳುವರೆ?
ಕೈಬಿಡುತಿದೆ ಕನ್ನಡನಾಡು । ಬಾ ಬೇಗ ಮಾಧವನೆ ನೋಡು

—ಮೇವುಂಡಿ ಮಲ್ಲಾರಿ

# ಕನ್ನಡಿಗನ ಕೊರಗು

ಸೊಕ್ಕಿನಲಿ ತಲೆಯೆತ್ತಿ ಜೊತೆಯವರ ಕೂಟದಲಿ,
ನಾವು ಸಮ ನಿಮಗೆಂದು ನುಡಿವ ಬಲವಿಲ್ಲ!
ಮಿಕ್ಕವರು ಕಡೆಗಣಿಸಿ ನೂಕಿದಾ ಕಡೆ ಬಿದ್ದು,
ಯಾವ ಮಂಕೋ ಕವಿದು ಹುದುಗಿರುವೆವಲ್ಲ?

ರೊಕ್ಕ ಕೈಯೊಳಗಿಲ್ಲ, ಹುರುಡು ಮೈಯೊಳಗಿಲ್ಲ,
ಹೆಮ್ಮೆಯೊಂದನು ನೆಚ್ಚಿ ದೆಸೆಗೆಟ್ಟೆವಲ್ಲ!
ಅಕ್ಕತಂಗಿಯರೆಲ್ಲ ಮುಂದು ಮುಂದಾಗಿರಲು
ನಮ್ಮ ತಾಯೊಬ್ಬಳೇ ಸೊರಗಿರುವಳಲ್ಲ!

ಅಮ್ಮನನು ಕೈಬಿಡದೆ ಇನ್ನು ಮೆರೆಸುವೆವೆ?
ಹಿರಿಯ ಹೆಸರನು ತಿರುಗಿ ಗಳಿಸಿಕೊಳ್ಳುವೆವೆ?
ಸರಿಯವರ ತಲೆಮೆಟ್ಟಿ ಮುಂದೆ ನಿಲ್ಲುವೆವೆ?
ನೆಮ್ಮದಿಯ ಬೆಳಕಿನಲಿ ನಾವು ಬಾಳುವೆವೆ?

— ತೀ. ನಂ. ಶ್ರೀಕಂಠಯ್ಯ

# ಕನ್ನಡದ ದೀಪವದು ಕಾಣದಿಹುದು !

೧

ಭಾರತಿಯ ಮನೆಯಲ್ಲಿ ಲಕ್ಷ ದೀಪಗಳಿಂದು
ನಕ್ಷತ್ರಗಳ ತೆರದಿ ಹೊಳೆಯುತಿಹವು !
ಪ್ರತಿ ದೀಪವೂ ತನ್ನ ಸ್ವಾತ್ಮತೇಜವ ಹರಡಿ,
ಹಚ್ಚಿದರ ಬೆಳ್ಜಸವ ಬೆಳಸುತಿಹವು !

೨

ಮೂಲೆ-ಮೂಲೆಗಳಿಂದ ಕೋಣೆ-ಕೋಣೆಗಳಿಂದ
ಚೈತನ್ಯಜ್ಯೋತಿಯಾ ಬೆಳಕು ಹರಿದು,
ಝಗಝಗಿಸಿ ಹೊಳೆಯುತಿದೆ ಭಾರತಾಂಬೆಯ ಮನೆಯು,
ಮುಸುಕಿರ್ದ ಕತ್ತಲೆಯ ತೆರೆಯು ಸರಿದು !

೩

ಮನೆಯೆಲ್ಲ ಥಳಥಳಿಪ ದೀಪಗಳ ದೀಪ್ತಿಯಲಿ,
ಮಿಂಚುಗಳು ಮೂಡುವಾ ತಾಣವಹುದು !
ಮೂಲೆಗಳು ಬೆಳಗಿದರು ನಡುಮನೆಯು ಕತ್ತಲೆಯು,
ಕನ್ನಡದ ದೀಪವದು ಕಾಣದಿಹುದು !

೪

ಹಿಂದುಗಳ ನಾಡಿನಲಿ ಗೂಡಾರಗಟ್ಟಿರ್ದ
ಗಾಢ ಕತ್ತಲೆಯೆಲ್ಲ ಸರಿದು ಹರಿದು,
ಒಂದೆ ತಾಣದಿ ನೆಲಸಿತೆಂಬಂತೆ ಕಾಣುತಿದೆ—
ಕನ್ನಡದ ಸಿರಿಮನೆಯು ಕಪ್ಪು—ಕರಿದು !

೫

ಮಿಂಚು ಹುಟ್ಟುವ ನಾಡು, ಮನಸು ಮಾಡಿದಡೊಮ್ಮೆ
ಬ್ರಹ್ಮಾಂಡವನ್ನೆಲ್ಲ ಬೆಳಗಬಹುದು!
ಕನ್ನಡದ ಸಿರಿವೆಳಗು ಮುನ್ನೀರುಗಳ ದಾಟಿ,
ನಿಟ್ಟುನಿಟ್ಟಿನ ನಾಡ ತೊಳಗಬಹುದು!

೬

ಮಂಗಳೂರಿನ ಮಣ್ಣ ಹಣತೆಯನು ಹದಗೊಳಿಸಿ,
ಮೈಸೂರ ಸಿರಿಗಂಧದೆಣ್ಣೆಯೆರೆದು—
ರಾಯಚೂರಿನ ಹತ್ತಿಯಲಿ ಬತ್ತಿಯಣಿಗೊಳಿಸಿ
ಧಾರವಾಡದ ಕೆಚ್ಚುಕಡ್ಡಿ ಕೊರೆದು—

೭

ಕನ್ನಡದ ಹೊಂದೀವಿಗೆಯು ಹಚ್ಚಲಿನ್ನೊಮ್ಮೆ—
ಬಸವ ವಿದ್ಯಾರಣ್ಯ ಹುಟ್ಟಿ ಬರಲಿ!
ಕನ್ನಡದ ವೈರಿಗಳ ಮೆಟ್ಟಿ, ಕನ್ನಡನಾಡ
ಚಿನ್ನರನ್ನದ ಗುಡಿಯು ಕಟ್ಟಿ ಬರಲಿ!

೮

ಕನ್ನಡದ ಬತ್ತಿಯೆಳೆಗಿಡಿದ ಮಂಕನು ತೆಗೆಯೆ,
ನನ್ನ ಕಾಯವು ಚಾಚುಕಡ್ಡಿಯಾಗಿರಲಿ!
ಭಾರತಿಯ ದೀವಳಿಗೆಯಲ್ಲಿ ಸಿರಿಗನ್ನಡದ
ಜ್ಯೋತಿಯಿದು ತೇಜಸ್ಸಿನೊಡ್ಡಿಯಾಗಿರಲಿ!

—ಕನ್ನಡದ ಕಂದ—ಕಾವ್ಯಾನಂದ

# ನನ್ನದು ಈ ಕನ್ನಡನಾಡು

ನಾನಿದನೇ ಹಾಡುವೆ ಹಾಡು; "ನನ್ನದು ಈ ಕನ್ನಡನಾಡು"

೧

ಕನ್ನಡನಾಡಿನ ಹಾಡನ್ನು ಬರೆಯುವುದಕೆ ಸಾಲದು ಮುಗಿಲು
ಶ್ರೀವ್ಯಾಸ ಶುಕಾದಿ ಕವಿಗಳು, ಬೇಸರಿಯುವರಿದನು ಬರೆಯಲು;
ಹಾಡುವುದಕೆ ಹದನಾದವರು ಆ ನಾರದ ತುಂಬರರುಗಳು.
ಈ ನಾಡಿನ ಹಾಡೆಮಗಿಂದು
ಒಳುದಾರಿಯ ತೋರುವುದೆಂದು
ಬಲು ಬೆಳಕನು ಬೀರುವುದೆಂದು
ಹಾಡುವೆ ಸಂತತವೀ ಹಾಡು; "ನನ್ನದು ಈ ಕನ್ನಡನಾಡು"

೨

ಸೀತಾ-ಲಕ್ಷ್ಮಣರೊಡಗೂಡಿ ಶ್ರೀರಾಮನು ವಸತಿಯ ಮಾಡಿ,
ಸುಗ್ರೀವ ಹನುಮರನು ನೋಡಿ ಅವರಿಂದೆ ಸಹಾಯವ ಬೇಡಿ,
ದಾನವಸಂಕುಲವನು ಕಾಡಿ, ದಶಕಂಠನ ನಾಶವ ಮಾಡಿ,
ವಾಲ್ಮೀಕಿ ಕವೀಶ್ವರನಿಂದೆ
ಈ ನಾಡ ಸಿರಿಯ ನಯದಿಂದೆ
ಹಾಡಿಸಿದನು ಸವಿನುಡಿಯಿಂದೆ;
ಹಾಡುವೆನದರಿಂದೀ ಹಾಡು, "ನನ್ನದು ಈ ಕನ್ನಡನಾಡು"

೩

" ದೇಸಿಗರಾಗಿಹ ಪಾಂಡವರು  ವನವಾಸದ ತಾಪವ ಸಹಿಸಿ,
ಅಜ್ಞಾತರಾಗಿ ಇರುವುದಕೆ  ಕನ್ನಡನಾಡನೆ ಆಶ್ರಯಿಸಿ,
ಹೊಂದಿದರು ಸಕಲ ಸೌಖ್ಯವನು  ಕೌರವ ಕುಲವನು ಸಂಹರಿಸಿ "
ಇಂತೆಂದು ನಮ್ಮ ನಾಡನ್ನು
ಮಧುರೋಕ್ತಿಯಿಂದೆ ಹಾಡಿಹನು
ಭಾರತದ ಬಾದರಾಯಣನು;
ಹಾಡುವೆನದಕೆಯೆ ಈ ಹಾಡು;  " ನನ್ನದು ಈ ಕನ್ನಡನಾಡು "

೪

ಶಂಕರಾರ್ಯರ್ ರಾಮಾನುಜರು,  ಆನಂದತೀರ್ಥಯತಿವರರು,
ಸನ್ಮತಗಳ ಸಂಸ್ಥಾಪಕರು  ಆಚಾರ್ಯತ್ರಯರೆನಿಸುವರು,
ಬಸವೇಶ್ವರ ಚೆನ್ನಬಸವರು  ಹರಿದಾಸರು ಶೈವಶರಣರು,
ಈ ನಾಡಿನಲಿಯೆ ಜನಿಸಿದರು ,
ತತ್ತ್ವದ ತಿರುಳನು ತಿಳಿಸಿದರು ,
ಮುಕ್ತಿಯ ಮಾರ್ಗದಿ ನಿಲಿಸಿದರು ,
ಭಾರತದ ಗುರುಕುಲವು ನೋಡು !  " ನನ್ನದು ಈ ಕನ್ನಡನಾಡು "

೫

ಕಾದಂಬ-ಗಂಗಕುಲನೃಪರು  ರಾಷ್ಟ್ರಕೂಟ ಸದ್ವಂಶಜರು,
ಚಾಲುಕ್ಯವಂಶ ವರ್ಧನರು  ಪುಲಿಕೇಶಿ ವೀರ ವಿಕ್ರಮರು,
ಸಂಗ್ರಾಮಶೂರ ಯಾದವರು  ವಿದ್ಯಾನಗರದ ನರವರರು,
ಅರಿರಾಜರೊಡನೆ ಕಾದಿದರು;
ತಮ್ಮಯ ನೆತ್ತರು ಸುರಿಸಿದರು;
ಈ ನಾಡನು ಸಿಂಗರಿಸಿದರು;
ಹಾಡುತಲೀ ಹುರುಳಿನ ಹಾಡು;  " ನನ್ನದು ಈ ಕನ್ನಡನಾಡು "

೬

ಶ್ರೀ ವಿದ್ಯಾರಣ್ಯ ಗುರುಗಳು ಈ ಹಾಡನಂದು ಹೇಳಿದರು;
ರಣಧೀರ ಬುಕ್ಕ-ಹರಿಹರರು ಕೇಳುತೆ ಬಲುಹನು ತಾಳಿದರು;
ಶ್ರೀ ಕೃಷ್ಣರಾಜ ನರವರರು ತಮ್ಮೆದೆಯೊಳಗಿದನು ಬರೆದರು;
ರಾಮರಾಜನಾ ಕಾಳೆಗದಿ
ತಾಳೀಕೋಟೆಯ ಕೊಳುಗುಳದಿ
ಹಾಡಿದನಿದನುಚ್ಚ ಸ್ವರದಿ,
ಕನ್ನಡಿಗನ ನನ್ನಿಯ ಹಾಡು, "ನನ್ನದು ಈ ಕನ್ನಡನಾಡು"

೭

ಪಂಪ ರನ್ನ ರತ್ನಾಕರರು, ಲಕ್ಷ್ಮೀಶ ರುದ್ರ ಹರಿಹರರು,
ಹಿಂದಣ ಹಿರಿಯರ ಮುಂದಿದನು ಇನಿನುಡಿಯಿಂದಲಿ ಹಾಡಿದರು;
ಮುಂದಣವರಿಗೂ ಬೇಕೆನುತೆ ಓಲೆಗಳಲಿ ಬರೆದಿಟ್ಟಿಹರು;
ನಿರ್ಜೀವಿಗಳಾದೋಲೆಗಳು,
ಹುರುಳೊಂದದ ಮೇಲು ಮಾತಿನೊಳು
'ಕನ್ನಡಿಗನೆ ನೀನಿದ ಕೇಳು!'
ಎನ್ನುತೆ ಹಾಡುವವೀ ಹಾಡು 'ನನ್ನದು ಈ ಕನ್ನಡನಾಡು'

೮

ರಮಣೀಯ ರಾಜಭವನಗಳು, ಗುಡಿ-ಗೋಪುರ-ಕೃತಕಾದ್ರಿಗಳು,
ಕೆರೆ ಕಾಲುವೆ ಬಾವಿಗಳು, ನೀರ್‌–ನೆಲ–ಬೆಟ್ಟದ ಕೋಟೆಗಳು,
ಕಲ್ಲಿನ ಮೇಲಿನ ಬರೆಹಗಳು, ಮಾಸತಿ–ವೀರರ ಕಲ್ಲುಗಳು,
ದೇಶಪ್ರೇಮವ ತಿಳಿಸುವವು;
ಸ್ವಾತಂತ್ರ್ಯಪಾಠ ಕಲಿಸುವವು;
ನಮಗಿಂದು ಹುರುಪುಗೊಡುತಿಹವು.
ಮೌನದಿ ಹಾಡುತಲೀ ಹಾಡು 'ನನ್ನದು ಈ ಕನ್ನಡನಾಡು'

೯

ಪರ್ವತರಾಜನು ನುಡಿಸುತಿಹ   ಕಮನೀಯ ಕೊಳಲನಾದದಲಿ,
ತಿಳಿನೀರಿನ ತುಂಬುದೊರೆಗಳು   ಸವಿಯಾದ ಸರವ ಬೆರೆಸುತಲಿ,
ಕಂಗೊಳಿಸುವ ಜಲಪಾತಗಳು   ಗಿರಿಕಂದರದೊಳು ಕುಣಿಯುತಲಿ,
ಕಿವಿಗಳಿಗಿಂಪನು ಮಾಡುವುವು;
ಕಣ್ಣಿಗೆ ಹಬ್ಬವ ನೀಡುವುವು;
ನಾಡಿನ ಸಿರಿ ಕೊಂಡಾಡುವುವು;
ಹಾಡುತಲೀ ಸೊಬಗಿನ ಹಾಡು   'ನನ್ನದು ಈ ಕನ್ನಡ ನಾಡು'

೧೦

ಹಸುರಾದ ಹುಲ್ಲ ಮೇಯುತಲಿ,   ಹಸು ಮೇಕೆ ಹುಲ್ಲೆ ಆನೆಗಳು,
ಹೊಸ ಮಾಮರಗಳನಾಸರಿಸಿ,   ಹಸುರ್ಗಿಣಿ ಕೋಗಿಲೆ ನವಿಲುಗಳು,
ಹೂದೋಟದಿ ಹಾರಾಡುತಲಿ,   ಅಲರುಣಿ ಅಳಿ ಮರಿದುಂಬಿಗಳು,
ಇನಿದಾದ ದನಿಯನೆತ್ತುತಲಿ
ಬಗೆಯೊಳು ನಲಿವನು ಬಿತ್ತುತಲಿ
ಬಳಲಿಕೆಯ ಬದಿಗೆ ಒತ್ತುತಲಿ
ಸಂತತ ಹಾಡುವುವೀ ಹಾಡು 'ನನ್ನದು ಈ ಕನ್ನಡನಾಡು'

೧೧

ಧನರಾಜ್ಯಲಕ್ಷ್ಮಿಯರ ಜೋಡು,   ನೂಪುರಗಳ ನುಡಿಸಿದ ನಾಡು,
ಸಜ್ಜನ ಖಗವೃಂದದ ಗೂಡು   ನರವೀರ ಸಿಂಹಗಳ ಬೀಡು,
ದಾತೃಕಲ್ಪತರುಗಳ ಕಾಡು   ಸಾಧ್ವೀರತ್ನದ ಕರುಮಾಡು,
ಧೈರ್ಯದ ಬೆಟ್ಟದ ತುದಿಗೋಡು,
ಸಂತೋಷ ಸೌಖ್ಯಗಳ ಸೂಡು,
ಅಜನಿಡುವ ಚಲುವಿಕೆಯ ಮಾಡು,
ಹಾಡುವೆನದರಿಂದೀಹಾಡು,   'ನನ್ನದು ಈ ಕನ್ನಡನಾಡು'

—'ಆನಂದಕಂದ'

# ಕನ್ನಡ

'ಕನ್ನಡ' ಎನೆ ಕುಣಿದಾಡುವುದೆನ್ನೆದೆ,
'ಕನ್ನಡ' ಎನೆ ಕಿವಿ ನಿಮಿರುವುದು;
ಕಾಮನ ಬಿಲ್ಲನು ಕಾಣುವ ಕವಿಯೊಲು
ತೆಕ್ಕನೆ ಮನ ಮೈಮರೆಯುವದು.
ಕನ್ನಡ! ಕನ್ನಡ! ಹಾ, ಸವಿಗನ್ನಡ!
ಕನ್ನಡದಲಿ ಹರಿ ಬರೆಯುವನು!
ಕನ್ನಡದಲಿ ಹರ ತಿರಿಯುವನು!
ಕನ್ನಡದಲ್ಲಿಯೆ ಬಿನ್ನಹಗೈದೊಡೆ
ಹರಿ ವರಗಳ ಮಳೆ ಕರೆಯುವನು!
ಹರ ಮುರಿಯದೆ ತಾ ಪೊರೆಯುವನು!
ಬಾಳುವುದೇತಕೆ? ನುಡಿ ಎಲೆ ಜೀವ:
ಸಿರಿಗನ್ನಡದಲಿ ಕವಿತೆಯ ಹಾಡೆ.
ಸಿರಿಗನ್ನಡದೇಳಿಗೆಯನು ನೋಡೆ.
ಕನ್ನಡ ತಾಯಿಯ ಸೇವೆಯ ಮಾಡೆ!

—ಕೆ. ವಿ. ಪುಟ್ಟಪ್ಪ

# ಕನ್ನಡ ನುಡಿ

ಎನಿತು ಇನಿದು ಈ ಕನ್ನಡ ನುಡಿಯು!
ಮನವನು ತಣಿಸುವ ಮೋಹನ ಸುಧೆಯು!

ಗಾನವ ಬೆರೆಯಿಸಿ
ವೀಣೆಯ ದನಿಯೊಳು
ವಾಣಿಯ ನೇವುರ
ನುಡಿಸುತೆ ಕುಣಿಯಲು
ಮಾಣದೆ ಮೊರೆಯುವ ಮಂಜುಳ ರವವೋ?
ಎನಿತು ಇನಿದು ಈ ಕನ್ನಡ ನುಡಿಯು!

ರಂಗನ ಮುರಲಿಯು
ಹಿಂಗದ ಸರದಲಿ
ಹೆಂಗಳೆಯರು ಬೆಳು-
ದಿಂಗಳಿನಿರುಳಲಿ
ಸಂಗೀತವನೊರೆದಂಗವಿದೇನೋ?
ಎನಿತು ಇನಿದು ಈ ಕನ್ನಡ ನುಡಿಯು!

ಗಿಳಿಗಳು ಉಲಿಯುವ
ಮೆಲುಮಾತುಗಳೋ?
ಕಳಕಂಠಗಳಾ
ಚೆಲುವಿನ ಕುಕಿಲೋ?
ಅಳಿಗಳ ಒಳಗದ ಬೆಸಗಿನ ಉಲಿಯೋ?
ಎನಿತು ಇನಿದು ಈ ಕನ್ನಡನುಡಿಯು!

— ಆನಂದಕಂದ

# ಎಮ್ಮ ಕನ್ನಡಂ

ವೀಣೆಯ ತಂತ್ರಿಯಿಂದುಗುವ ಸುಂದರ ಸುಸ್ವನದಂತೆ ಚೆಲ್ವು ನೀ
ರ್ತಾಣದ ಕೇಳಿಯೊಳ್ ನಗುವ ಬಾಲೆಯರಿಂಚರದಂತೆ ಮಂಜುಳಂ
ಜಾಣಿನ ಭಾರದಿಂ ಕೆಡದ ಬಾಲನ ಮೆಲ್ಲುಲಿವೊಲ್ವಿಮೋಹಕಂ
ವಾಣಿಯ ಕೂರ್ಮೆಯಿಂ ಬೆಳೆದು ಪೆರ್ಚಿದ ಭಾಷೆಯಿದೆಮ್ಮ ಕನ್ನಡಂ ॥

—ಶ್ರೀನಿವಾಸ

# ಸಾಯು... ...ಮ್ಮ ನುಡಿ ಓ ಕನ್ನಡದ ಕಂದರಿರ

ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ,
ಹೊರ ನುಡಿಯು ಹೊರೆಯಿಂದ ಕುಸಿದು ಕುಗ್ಗಿ!
ರಾಜ ನುಡಿಯೆಂದೊಂದು, ರಾಷ್ಟ್ರನುಡಿಯೆಂದೊಂದು,
ದೇವ ನುಡಿಯೆಂದೊಂದು ಹತ್ತಿ ಜಗ್ಗಿ
ನಿರಿನಿಟಿಲು ನಿಟಿಲೆಂದು ಮುದಿಮೂಳೆ ಮುರಿಯುತಿದೆ
ಕನ್ನಡಮ್ಮನ ಬೆನ್ನು ಬಳುಕಿ ಬಗ್ಗಿ!
ಕೂಗಿಕೊಳ್ಳಲು ಕೂಡ ಬಲವಿಲ್ಲ: ಮಕ್ಕಳೇ
ಬಾಯ್ಮುಚ್ಚಿ ಹಿಡಿದಿಹರು ಕೆಲರು ನುಗ್ಗಿ!

ಮೊಲೆವಾಲಿನೊಡಗೂಡಿ ಬಂದ ನುಡಿ ತಾಯಿನುಡಿ;
ಕೊಲೆಗೈದರಮ್ಮನನೆ ಕೊಲಿಸಿದಂತೆ!
ತಾಯ್ ಮುತ್ತು ಕೊಡುವಂದು ನಿಮ್ಮ ಕೆನ್ನೆಯ ಮೇಲೆ
ಮೆರೆಯಿತದು ಪೋಣಿಸಿದ ಮುತ್ತಿನಂತೆ:
ನಿಮ್ಮ ನಲ್ಲೆಯರೊಡನೆ ನಲ್ನುಡಿಯ ನುಡಿವಂದು
ಕನ್ನಡವೆ ಕಲಿಸುವುದು ತುಟಿಗೆ ಬಂದು:
ನುಡಿವಂದು ನಿಮ್ಮ ಮುದ್ದಿನ ಹಸುಗಳನೆತ್ತಿ
ಕನ್ನಡವೆ ನಿಮಗೀವುದೊಲವ ತಂದು.

ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರ !

ಇರುವಲ್ಪ ಶಕ್ತಿಯನು, ಇರುವಲ್ಪ ದ್ರವ್ಯವನು,
ಪರಭಾಷೆ ಮೋಹಕ್ಕೆ ಚೆಲ್ಲಬೇಡಿ;
ಹೂವಮಾಲೆ ಸೂಡುವೆವು ಕೊರಳಿಂಗೆ ಎಂದೆನುತೆ
ನೇಣುರುಳನೆಳೆದಯ್ಯೊ ಕೊಲ್ಲಬೇಡಿ.
ಪರಕೀಯರೆಲ್ಲರಾಶೀರ್ವಾದ ಕರವೆತ್ತಿ
ಹರಸುತ್ತ ಬರುವರೈ ಮೊದಲು ಮೊದಲು;
ಕಡೆಗದುವೆ ಕುತ್ತಿಗೆಗೆ ಕರವಾಳವಾಗುವುದು:
ನಮ್ಮ ನಾಲಗೆ ನಮಗೆ ಕೀಳುತೊದಲು !

ನಿಮ್ಮ ನುಡಿ ನಿಮ್ಮ ಗಂಡಸುತನಕೆ ಹಿರಿ ಸಾಕ್ಷಿ;
ಬಲವಿದ್ದರದಕೆ ನಿಮಗಿಹುದು ಶಕ್ತಿ.
ನುಡಿ ಮಡಿದರೆಲ್ಲರೂ ಮೂಕ ಜಂತುಗಳಂತೆ;
ಬಾಲವಲ್ಲಾಡಿಪುದೆ ಪರಮ ಭಕ್ತಿ !
ಉತ್ತರದ ಕಾಶಿಯಲಿ ಕತ್ತೆ ಮಿಂದೈತರಲು
ದಕ್ಷಿಣದ ದೇಶಕದು ಕುದುರೆಯಹುದೆ ?
ತಾಯಿತ್ತ ಮೊಲೆಹಾಲೆ ನಿಮ್ಮ ಮೈಗಾಗದಿರೆ
ಹೊತ್ತ ಹೊರೆ ಬಲಕಾರಿ ನೆತ್ತರಹುದೆ ?

ಕಣ್ದೆರೆಯಿರೇಳಿ, ಓ ಕನ್ನಡದ ಮಕ್ಕಳಿರ,
ಗರ್ಜಿಸುವುದನು ಕಲಿತು ಸಿಂಹವಾಗಿ !
ನಖದಂಷ್ಟ್ರ ಕೇಸರಂಗಳ ಬೆಳೆಸಿ, ಹುರಿಗೊಂಡು
ಶಿರವೆತ್ತಿ ನಿಂತು, ಕುರಿತನವ ನೀಗಿ !

—ಕೆ. ವಿ. ಪುಟ್ಟಪ್ಪ

## ಕನ್ನಡ್ ಪದಗೊಳು

ಯೆಂಡ ಯೆಡ್ತಿ ಕನ್ನಡ್ ಪದಗೊಳ್
ಅಂದ್ರೆ ರತ್ನಂಗ್ ಪ್ರಾಣ!
ಬುಂಡೇನ್ ಎತ್ತಿ ಕುಡದ್ಬುಟ್ಟಾಂದ್ರೆ—
ತಕ್ಕೊ! ಪದಗೊಳ್ ಬಾಣ!

ಬಗವಂತ್ ಏನ್ರ ಭೂಮಿಗ್ ಇಳದು
ನನ್ ತಾಕ್ ಬಂದಾಂತ್ ಅನ್ನು;
ಪರ್ಗಿರೀಕ್ಸೆ ಮಾಡ್ತಾನ್ ಔನು—
ಬಕ್ತನ್ ಮೇಲ್ ಔನ್ ಕಣ್ಣು!

‘ಯೆಂಡ ಕುಡಿಯೋದ್ ಬುಟ್‌ಬುಡ್ ರತ್ನ!’
ಅಂತ ಔನ್ ಏನಾರ್ ಅಂದ್ರೆ—
ಮೂಗ್ ಮೂರ್ ಚೂರಾಗ್ ಮುರಸ್ಕೋಂತೀನಿ
ದೇವರ್ ಮಾತ್ಗ ಅಡ್ಬಂದ್ರೆ!

## ಕನ್ನಡ್ ಪದಗೊಳು

‘ಯೆಂಡ ಬುಟ್ಟಿ. ಯೆಡ್ತೀನ್ ಬುಟ್‌ಬುಡ್!’
ಅಂತ ಔನ್ ಏನಾರ್ ಅಂದ್ರೆ—
ಕಳದೋಯ್ತು ಅಂತ ಕುಣದಾಡ್ತೀನಿ
ದೊಡ್ದ್ ಒಂದ್ ಕಾಟ! ತೊಂದ್ರೆ!

‘ಕನ್ನಡ್ ಪದಗೋಳ್ ಆಡೋದ್ನೆಲ್ಲ
ನಿಲ್ಲಿಸ್ ಬುಡಬೇಕ್ ರತ್ನ!’
ಅಂತ್ ಔನ್ ಅಂದ್ರೆ—ದೇವ್ರ್ ಆದ್ರ್ ಏನು!
ಮಾಡ್ತೀನ್ ಔನ್ಗೆ ಖತ್ನ!

ಆಗ್ನೆ ಮಾಡೋ ಐಗೊಳ್ ಎಲ್ಲಾ
ದೇವ್ರೆ ಆಗ್ಲಿ—ಎಲ್ಲ!
ಕನ್ನಡ್ ಸುದ್ದೀಗ್ ಏನ್ರು ಬಂದ್ರೆ
ಮಾನಾ ಉಳಸಾಕಿಲ್ಲ!

ನರಕಕ್ಕ್ ಇಳ್ಸಿ ನಾಲ್ಗೆ ಸೀಳ್ಸಿ
ಬಾಯ್ ಒಲಿಸಾಕಿದ್ರೂನೆ—
ಮೂಗ್ನಲ್ ಕನ್ನಡ್ ಪದವಾಡ್ತೀನಿ!
ನನ್ನ ಮನಸನ್ನ್ ನೀ ಕಾಣೆ!

ಯೆಂಡ ಓಗ್ಲಿ! ಯೆಡ್ತಿ ಓಗ್ಲಿ!
ಎಲ್ಲಾ ಕೊಚ್ಕೊಂಡ್ ಓಗ್ಲಿ!
ಪರ್ಪಂಚ್ ಇರೋತನಕ ಮುಂದೆ
ಕನ್ನಡಾ ಪದ್ಗೊಳ್ ಸುಗ್ಲಿ!

—ರತ್ನ

# ಕರ್ನಾಟಕದ ಕನಸು

ಮೂಡುತಿದೆ ಏಕೈಕ ಕರ್ನಾಟಕದ ಕನಸು:
ನೋಡುತಿದೆ ನಿಡುಬಯಸಿ ನಿಖಿಲ ಕನ್ನಡ ಮನಸು!

೧

ಕಾವೇರಿ ಸಿರಿಯಡಿಯು, ಗೋದಾವರಿಯ ಮುಡಿಯು,
ಮೂಡುಮಲೆಯೆಡದ ಗಡಿಯು,
ಪಡುಗಡಲ ಬಲದ ತಡಿಯು;
ವರ್ಣಶಿಲ್ಪದ ಕಲೆಯು ಚೆಲ್ವಿನ ಶಿಲೆಯ ಗುಡಿಯು,
ಕನ್ನಡದಿಂಪು ನುಡಿಯು;

೨

ಶಿಶು ರೂಪಿ, ಪಶು ರೂಪಿ, ಜನ ರೂಪಿ, ಮನ ರೂಪಿ,
ನವ್ಯ ಶಾದ್ವಲ ರೂಪಿ,
ಕಲ ಕಲ ಪಕ್ಷಿ ರೂಪಿ;
ನವ ಸರೋವರದಂತೆ, ನವ ಶಾಲಿ ವನದಂತೆ,
ನವ ಯೌವನದ ಮೊದಲ ನವ ವಧೂವರರಂತೆ;
ನವ ಕವಿಯ ನವರಸ ನವೀನ ಕೃತಿಯಂತೆ,
ದಿವ್ಯ ವೀಣಾಗಾನ ಗತಿಯಂತೆ;

೩

ಕನ್ನಡದ ಮಕ್ಕಳಿರ, ಬನ್ನಿರೈ ಓ ಬನ್ನಿ.
ಮನದ ನವನೀತವನು ಹೃದಯದೊಳಿರಿಸಿ ತನ್ನಿ.
ತಿರೆಕಿವುಡು ನೀಳ್ವಂತೆ ನೀಳಿಂಚರದೊಳೆನ್ನಿ:—
'ಭಾರತಾಂಬೆಯ ಕನ್ಯೆ ಕನ್ನಡಾಂಬೆಯೆ ಧನ್ಯೆ!
ಜಯತು ಜೈ!
ಜಯತು ಜೈ!
ಜಯತು ಜೈ! – ಜೈ! ಜೈ! ಜೈ!'

—ಕೆ. ವಿ. ಪುಟ್ಟಪ್ಪ

# ಆಶಯ

ತಾಯಿನುಡಿ ಸೇವೆಯಲಿ ಕಳೆಯಲೆನ್ನಯ ಕಾಲ
ತಾಯಿನಾಡಿನ ಶ್ರೇಯಕಿರಲೆನ್ನ ಧ್ಯೇಯ.

ನಾಡಿನುನ್ನತಿಯನಾ ನಾಡನುಡಿಯೇಳ್ಗೆಯಿಂ
ನೋಡಲಾರ್ಪುದರಿಂದಲೆನ್ನ ತಾಯಿ-
ನಾಡನುಡಿಯುನ್ನತಿಯ ಒಯಕೆಯಿಂದೆನ್ನ ತನು-
ಮನ-ಧನಗಳೆಗಳುಂ ಸವೆಯುತಿರಲಿ.

ಜಸದೆಸಕಜಾಲದಿಂ ದೂರವಿರಲೆನ್ನ ಮನ
ಮುಸುಕದಿರಲೆನ್ನ ಬಗೆ ಸ್ವಾರ್ಥತಮದಿಂ;
ಕುಸುಮವಾಸನೆವಿಸರದಂತೆನ್ನ ಜೀವನದ
ಪ್ರತಿಕೃತಿಗಳೆಸೆದಿರಲಿ ದೆಸೆದೆಸೆಯಲಿ.

ಸುಜಲದಿಂ ತವಿಪ ಸುಫಲಂಗಳಿಂ ಪೋಷಿಸುವ
ಸಸ್ಯಶ್ಯಾಮಲೆ ಪ್ರೀತೆ ಭೂಮಾತೆಯು
ನಿಜಪಾದಕಮಲದರ್ಶನೆ ಸದಾ ಸುಮನದಿಂ
ದೊಗೆದ ಹೃತ್ಕುಸುಮದಿಂ ನಡೆಯುತಿರಲಿ.

ಜಯತು ಕರ್ನಾಟಕಂ ಜಯತು ಭಾರತ ಭೂಮಿ
ಜಯತು ಸಾರಸ್ವತೋದ್ಯೋಗದೆಸಕಂ;
ಜಯತು ಮಾತೆಯ ಬಂಧಮುಕ್ತಿಯೋಧರ ಚಾಗ
ಜಯ ಸದಾ ಜಯತು ಜಯ ಕರ್ನಾಟಕಂ.

—ಟಿ. ನಾರಾಯಣಭಟ್ಟ

# ಕನಸಿನೊಳಗೊಂದು ಕಣಸು

'ಯಾರು ಸಿಂದವರಲ್ಲಿ ತಾಯೆ!' ಎಂದೆ!
'ಯಾರು ಕೇಳುವರೆನಗೆ ಯಾಕೆ ತಂದೆ?'

'ಬೇಸರದ ದನಿಯೇಕೆ ಹೆಸರ ಹೇಳಲ್ಲ.'
'ಹೆಸರಾಗಿಯೂ ಕೂಡ ಹೇಳಹೆಸರಿಲ್ಲ.'

'ನೀನಾರ ಮನೆಯವಳೊ ಮುತ್ತೈದೆ ಹೇಳು.'
'ನಾನಾರ ಮನೆಯವಳೊ ಬಯಲನ್ನೆ ಕೇಳು.'

'ಆಪ್ತರಿಲ್ಲವೆ ನಿನಗೆ ಇಷ್ಟರಿಲ್ಲೇ?'
'ಗುಪ್ತರಾದರೊ ಏನೊ ಇಷ್ಟರಲ್ಲೇ?'

'ಇರುವರೇ ಇದ್ದರೇ ಮಕ್ಕಳೆಂಬವರು?'
'ಇರುವರೆಂದರು ಕೂಡ ಯಾರು ನಂಬುವರು?'

'ಮನೆಯಿಲ್ಲವೇ ಇರಲು, ಪರದೇಶಿಯೇನು?'
'ಮನೆಯ ಮುನಿದೆದ್ದಿರಲು ಯಾ ದೇಶವೇನು?'

'ನಿನ್ನ ಮಾತಿನಲಿಹುದು ಒಡಪಿನಂದ.'
'ನಿನ್ನ ಹತ್ತಿರದೊಂದೆ ಉಳಿದಿಹುದು ಕಂದ.'

'ರಾಜಮುಖಿ ನಿನ್ನಲ್ಲಿ ರಾಜಕಳೆಯಿಹುದು.'
'ಸಾಜವಾದರು ಪಕ್ಷಿಯಿದು ವಧ್ಯವಹುದು.'

'ಯಾವುದಾದರ ನಾಡದೇವಿಯೇ ನೀನು?'
'ಭಾವುಕರ ಕಂಗಳಿಗೆ ದೇವಿಯೇ ನಾನು.'

'ಈಗ ಬಂದಿಹುದೇಕೆ ಏನು ಬಿಸನ?'
'ಯೋಗವಿಲ್ಲದೆ ತಿಳಿಯದೆನ್ನ ವೆಸನ!'

'ಹಾದಿ ಯಾವುದು ಹೇಳು ಯಾವ ಯೋಗ?'
'ಆದಿ ಅಂತವು ಇಲ್ಲದಂಥ ತ್ಯಾಗ!'

'ಬೇಡ ಬಂದಿಹೆ ಏನು ಏನಾದರೊಂದು?'
'ಬೇಡಿದರೆ ಬೇಡಿದುದ ಕೊಡುವೆಯಾ ಇಂದು?'

'ಅಹುದು ಕೊಡುವೆನು ಎಂದು ನಾನೆನ್ನಬಹುದೇ?'
'ಬಹುದುಗಿಹುದಿನ ಶಂಕೆ ವೀರನಹುದೇ?'

'ಹಿಂಜರಿವ ಅಂಜಿಕೆಯು ಹಿಡಿದಿಹುದು ಕೈಯ.'
'ಮುಂಜರಿವ ಹುರುಪಿನೊಡ ಮುಂದೆ ಬಾರಯ್ಯ.'

'ಇಲ್ಲೆನ್ನಲಾರೆ ನಾನಹುದೆನ್ನಲಮ್ಮೆ.'
'ಬಲ್ಲವರು ದೈವವನು ಪರಕಿಸುವರೊಮ್ಮೆ.'

'ಚಂಡಿ ಚಾಮುಂಡಿ ಪೇಳ್ ಬೇಕಾದುದೇನು?'
'ಗಂಡುಸಾದರೆ ನಿನ್ನ ಬಲಿಕೊಡುವೆಯೇನು?'

* * * *

ಮನವು ನಡುಗಿತು ತನುವು ನವಿರಿಗೊಳಗಾಯ್ತು;
ನೆನವು ನುಗ್ಗಿತು—ಹೊರಗೆ ಕಂಡೆ—ಬೆಳಗಾಯ್ತು.

—ಅಂಬಿಕಾತನಯದತ್ತ

## ಅರುಣೋದಯ

ಕನ್ನಡ ನಾಡಿನ ಮುಂಬಾನೊಳು ಚೆಂ
ಬಣ್ಣದ ಬೆಳಕು ಇದೇತರದು?
ಹೊನ್ನಗದಿರ ಬರಲಿಹನೆಂದೊರೆಯಲು
ಮುನ್ನವೆ ಬಂದರುಣನದೆ ಇದು ?
ನನ್ನಿಯು ! ನಿಜ ! ಅರುಣನದೆ ಇದು !

ಭಲೆ ಭಲೆ ! ನಮ್ಮಯ ಬಳಿಯಿಹ ಬಾನೊಳೆ
ತೊಳಗುವ ನೇಸರು ಮೂಡವನು ,
ಹೊಳೆಯುವ ಕೈಗಳನೆಳೆದೆಲ್ಲೆಡೆಯಲಿ
ಬೆಳಕು ಬೆಳಕನೇ ಮಾಡುವನು;
ಹೊಳಪನು ಎಲ್ಲಕೆ ನೀಡುವನು.

ಬೆಳಕನು ಮಾಡಲು ಕಳೆದುಹೋಗದೆಯೆ
ಉಳಿಯುವುದೇ ಕೊಳೆಗತ್ತಲೆಯು ?
ಮಲಗಿದ ಕನ್ನಡದೆಳೆಯರು ಏಳುತೆ
ಸುಳಿದಾಡುವ ! ಎತ್ತೆತ್ತಲೆಯು;
ನಲಿದಾಡುವ ! ಎತ್ತೆತ್ತಲೆಯು.

ಮಿರುಗುವ ಕಿರಣವ ಹರಡುತೆ ನೇಸರು
ನಡುಬಾನಿಗೆ ತಾನೇರುವನು,
ಬಿರಿಮುಗುಳೆಲ್ಲವಸರಳಿಸಿ ಹುರುಳನು
ಹವೆಯೊಳಗೆಲ್ಲಿಯು ತೂರುವನು,
ಅವನಿಗೆ ಕಂಪನು ಬೀರುವನು.

ಕನ್ನಡ ನಾಡಿನ ಗುಡಿಗಳಸಕೆ ಹೊಸ-
ಬಣ್ಣವನೀತನು ಹಾಕುವನು,
ಹೊನ್ನಿನ ಕಿರಣದ ಹಂದರ ಬಿಗಿಯುತೆ
ಕನ್ನಡಿಗರನಲ್ಲಿರಿಸುವನು,
ಎಲ್ಲರ ಎದೆಗಳ ಬೆರಸುವನು.

ಭಯವೇತರದಾವಾಗ ನಮಗೆ? ನಿ-
ರ್ಭಯರು! ನೆರೆದು ಕುಣಿ-ಕುಣಿದಾಡಿ,
'ಜಯ ಜಯ ಜಯ ಕರ್ನಾಟಕ' ಎನ್ನುತೆ
ಹಾಡುವ ನಾವೆಲ್ಲರು ಕೂಡಿ;
ಕೂಗುವ ನಾವೆಲ್ಲರು ಕೂಡಿ.

ಕನಸಿನೊಳಗೆ ಕಣ್ಮುಚ್ಚಿಯೆ ನೋಡಿದ
ಇನಿನೋಟದ ಪಟಗಳ ಬರೆದು,
ನನಸಿನಲಿಯು ಕಾಣುವ ತೆರಮಾಡುತೆ
ಜನಕಚ್ಚರಿ ತೋರುವ! ನೆರೆದು
ಬೆರಗನುಗೊಳಿಸುವ ನಾವ್ ಬೆರೆದು.

ಕೇಳಿರಿ ಕೇಳಿರಿ ಕೋಳಿಯು ಕೂಗನು
ಕೇಳಿಸುವುದೆ ಬೆಳಗಿನ ಕಾಳಿ?
'ಏಳೈ ಕನ್ನಡ ಭಾಗ್ಯವಿಧಾತನೆ'
ಎನುತೆ ಹಾಡುತಿಹ ವೈತಾಳಿ;
ಸುಳಿಯುತಿಹುದು ನಸುಕಿನಗಾಳಿ;
ಅಲಸಿಕೆಯುಳಿದೆಲ್ಲರು ಏಳಿ!

— ಆನಂದಕಂದ

# ಕನ್ನಡಾಂಬೆಯ ವಿಜಯೋತ್ಸವ

**ರಾಗ: ಬಿಲಹರಿ — ಝುಂಪೆತಾಳ**

ಜಯಿಸಿ ಬೆಳಗಲಿ ನಮ್ಮ ಕನ್ನಡದ ನಾಡು ।
ಸಿರಿ ಶಾರದೆಯರೊಲಿದು । ಕಲೆತು ನರ್ತಿಪ ಹಾಡು ॥ ಪ ॥

ಕನ್ನಡಿಗರೊಂದಾಗಿ । ಸೇವೆಯೊಳು ಮುಂದಾಗಿ ।
ವಿತರಣವೆ ಕುಂದಾಗಿ । ಬದುಕಿ ಬಾಳಿ ॥
ಧರೆಗೂರೆ ಕೋಲಾಗಿ । ದಳಿತರಿಗೆ ಹಾಲಾಗಿ ।
ಜನತೆಯೊಳು ಮೇಲಾಗಿ । ಚಿರಯಶವ ತಾಳಿ ॥

ಅರಸುಗಳಿಗಿದು ವೀರ । ಅಧಿರಾಜರಧಿಕಾರ ।
ಸರಸಿಗಳಿಗಾಧಾರ । ಸುಖದ ಸಾರ ॥
ರಮಣಿಯರ ಮಣಿಹಾರ । ಲಲಿತಕಲೆಗಾಗರ ।
ನಿರತಿಶಯ ಶೃಂಗಾರ । ಅಮೃತಕೂಪಾರ ॥

ಧರ್ಮಮಾರ್ಗದ ಬೆಳಕು । ಪರಚಕ್ರಗಳಿಗಳುಕು ।
ರೀತಿನೀತಿಯ ಪಳುಕು । ಭಾಗ್ಯಯೋಗ ॥
ರಾಮನಾಶಯದೊಲವು । ಜಯಚಾಮುಸಲಿ ನಿಲುವು ।
ಇಷ್ಟಸಿದ್ಧಿಯ ಗೆಲವು । ಫಲಿಸಲೀಗ ॥

—ಬೆನಗಲ್ ರಾಮರಾವ್

# ತಾಯಿಸೇವೆ

ಎನ್ನ ಕರುಳಿನ ಮಾಲೆ ನಿನ್ನ ಶಿರದೊಳಗಿಟ್ಟು ।
ನರಗಳನು ಬಗೆದೊಂದು ವೀಣೆಯನು ಮಾಡಿ ॥
ನಿನ್ನ ಗುಣಗಳ ಗಾನ ಮಾಡಲೇನಮ್ಮ ।
ತೆಗೆದಿಡಲೆ ಶಿರಕಮಲ ನಿನ್ನಡಿಯೊಳಮ್ಮ ॥

ನೀಲಗಿರಿ ಮದಕರಿಗಳನು ಹಿಡಿದು ತರುವೆ ।
ಚಂದನದ ಮರ ಕಡಿದು ತೇರೊಂದು ಮಾಳ್ಪೆ ॥
ಉತ್ತುಂಗ ಶಿಖರಗಳ ಕಳಸಂಗಳಿಡುವೆ ।
ತೇರಿನೊಳು ನನ್ನ ಹೃತ್ಕಮಲವನ್ನಿಡುವೆ ॥

ಆದರ ಮಧ್ಯದಿ ನಿನ್ನ ಕುಳ್ಳಿರಿಪೆನಮ್ಮ ।
ನಿನ್ನ ಮೆರೆಸುವೆನು ಭೂಮಂಡಲದೊಳಮ್ಮ ॥
ಧಬೆ ಧಬೆಗಳೊಳು ನಿನ್ನ ಗಾಯನವ ಕೇಳ್ವೆ ।
ಸಿಂಹಗಳ ಗರ್ಜನೆಗಳೊಳು ನಿನ್ನ ಮೇಲ್ಮೆ ॥

ಹಕ್ಕಿಪಕ್ಕಿಗಳಿಂಚರದಿ ನಿನ್ನ ಕೀರ್ತಿ ।
ಪಾಡಲ್ಕೆ ಕೊಟ್ಟವರದಾರು ಆ ಸ್ಫೂರ್ತಿ ॥
ನಿನಗೆ ಹೆಸರಿಡುವವರ ನಾಲಗೆಯ ಸೀಳ್ವೆ ।
ಹೆಡಮುರಿಗೆ ಕಟ್ಟಿ ತಂದಿಡುವೆ ನಿನ್ನಡಿಗೆ ॥

ಮುದ್ದಿನಂಗಡಿಗೊಂದು ಕಿಡಿಯು ಬೇಕಮ್ಮ ।
ಎನ್ನ ಸ್ಫೂರ್ತಿಗೆ ನಿನ್ನ ಕೃಪೆಯು ಸಾಕಮ್ಮ ॥
ನಿನ್ನ ಮಗನಲ್ಲವೇನಮ್ಮ ನಾನು ।
ವರದ ಹಸ್ತವನಿಟ್ಟು ಕಳುಹಮ್ಮ ನೀನು ।

—ಸ್ವಾ ವಿ

# ಹರಕೆ

ಭೋಗಕ್ಕೆ ಮನಸೋತು ವಿಕಟ ವಿಟಗಣದಂತೆ
ಆಗಿರುವದೀಗ ನಾಡು
ರೋಗಕ್ಕೆ ಮೈಸೋತು ಕೈಸಾಗದಾಗಿಹುದು
ಯೋಗಸ್ಥನಾಗಿ ಹಾಡು

ಯೋಗಸ್ಥನಾಗಿ ಗಡ ಹಾಡುಗಳ ಹಾಡುತ್ತ
ಕನ್ನಡಿಗರೊಡನೆ ಹಾಡು
ಯೋಗ–ಭೋಗದ ಭೂಮಿಯಾಗಿ ಸಾಗುವ ಹಾಗೆ
ಕನ್ನಡದ ನಾಡು ಮಾಡು.

—ಅಂಬಿಕಾತನಯದತ್ತ

# ಓ ಹಾಡೆ !

೧

ಒಗೆಯು ನಗೆಯಲಿ ಸುಳಿವ ಉಗೆವಾಡದಲಿ ಕುಳಿತ
ಜಗವ ಗೆಲ್ಲಲು ನಸುಕಿನಲ್ಲಿ ಅದೆ ದರದಳಿತ
ಕಮಲ ಕೋರಕದಂತೆ ಬಾಯ್ದೆರೆದ ಚೆನ್ನೆ !
ವಿಮಲ ತಾರಗೆಯಂತೆ ಗೆಯ್ವ ಕಣ್ಣನ್ನೆ !
ಬೆಂದು ಬಂದೆನು ಒಂದು ವರವ ನೀಡೇ
ಓ ಹಾಡೆ, ಓ ಹಾಡೆ, ಓ ಹಾಡೇ !

೨

ತುಸುವು ಕೇಳಲು ಕೂಡ ಸೊಲ್ಲ ಮರೆತಿರಬೇಕು
ರಸವ ಹೀರಲು ಕೂಡ ಎಲ್ಲ ಅರಿತಿರಬೇಕು.
ಇಂಥ ಪದವನು ಹಾಡು ಹಾಡೊಮ್ಮೆ ನಲ್ಲೆ
ಅಂಥ ತನಿಗುಸುರನ್ನು ನೀನೊರ್ವೆ ಬಲ್ಲೆ
ಹೇಳು-ಕೇಳುವೆ; ನನ್ನ ಧನ್ಯವ ಮಾಡೇ
ಓ ಹಾಡೆ, ಓ ಹಾಡೆ, ಓ ಹಾಡೇ !

ಓ ಹಾಡೇ !

೩

ಭೋಗಯೋಗದ ಪದವೆ! ಜೈನ ವಾಙ್ಮಯ ಮಧುವೆ!
ಯೋಗಭೋಗದ ಹದವೆ! ವಚನ ಬ್ರಹ್ಮನ ವಧುವೆ!
ಮುದ್ದು ಏಕಲಗೆ ಮಾರಿಕೊಂಡ ದಾಸಿ!
ಮುದ್ದಣನ ಲಲ್ಲೆವಾತಿನ ಪ್ರೇಮರಾಶೀ !
ಜೀವ ಜೀವಾಳದಲಿ ಬೆರೆತು ಕೂಡೇ
ಓ ಹಾಡೆ, ಓ ಹಾಡೆ, ಓ ಹಾಡೇ !

೪

ಮುಂಗೈಯ ಮೇಲೆ ಅಂಗಜನ ಅರಗಿಳಿಯಿರಿಸಿ
ಮುಂಗಾವಲೆಂದು ಸುಗ್ಗಿಯ ಕೋಕಿಲವ ಸರಿಸಿ
ನೂರುಕಣ್ಣಿನ ನವಿಲ ಸತ್ತಿಗೆಯಮಾಡಿ
ಚಾರುತಮ ಸರಸ ಅರಸಂಚೆಯನು ಹೂಡಿ
ಬಂದು ನನ್ನಿದಿರಲ್ಲಿ, ನಾಟ್ಯವಾಡೇ
ಓ ಹಾಡೆ, ಓ ಹಾಡೆ, ಓ ಹಾಡೇ !

೫

" ಜಡಿಮಳೆಯು ಜಡಿಯುವಂತೆ ಹಾಡಿದರೆ ಹಾಡುವದು
ಇಡಿಯಿಳೆಯು ಹಸುರಾಗಿ ಮಾಡಿದರೆ ಮಾಡುವದು "
ಮಾತು ಮಾತಾಡವ್ವ ಮತ್ತೆ ಮಾತಾಡೇ
ಸೋತೆನೊಂದೇ ಮಾತು ಕೇಳಿ, ಮಾತಾಡೇ
ತೆರವುಗೊಡದಿರು ಮೌನ ಬೇಡ ಬೇಡೇ
ಓ ಹಾಡೆ, ಓ ಹಾಡೆ, ಓ ಹಾಡೇ!

೬

“ ಬಿಡಿಸಿ ಸೆರೆವಿಡಿದು, ಸೆರೆಗೈದು ಬಿಡುಗಡೆಗೊಳಿಸಿ
ಕೆಡಿಸಿ ಕಟ್ಟುತ, ಮತ್ತೆ ಕಟ್ಟಿ ಕೆಡಿಸುತಲುಳಿಸಿ
ಸೂಸಲದ ಒಲವುಳ್ಳ ಮಾತ ಮಾತಾಡು
ಮೀಸಲದ ರಸವುಳ್ಳ ಒಳಹಾಡು ಹಾಡು ”
ತಡೆಯುದಿರು ತಡೆಯುದಿರು ಹಾಗೆಯಾಡೆ
ಓ ಹಾಡೆ, ಓಹಾಡೆ, ಓ ಹಾಡೇ !

೭

“ ಬಿತ್ತಿದರೆ ಬಿತ್ತುವದು ಮುಕ್ಕು ಚಿಕ್ಕೆಯು ಕಾಳು.
ಮುತ್ತುರತುನವ ಬಿತ್ತಿ ಮಾಡದಿರು ಹೊಲ ಹಾಳು
ಜೀವವನು ಚಾಚಿ ಮುಗಿಲಂಗಳಕೆ ಹಚ್ಚಿ
ದೇವನೊಡೆ ನುಡಿವಂತೆ ಮಾಡು ಮೆಚ್ಚಿ;
ಏಳು ಮಲಗಿದಿಯೇಕೆ **ಶರಣನಾಡೇ** ”
ಓ ಹಾಡೆ, ಓ ಹಾಡೆ, ಓ ಹಾಡೇ.

೮

ಅಳುವ ಕೂಸನು ಲಾಲಿಯೆಂದು ಮಲಗಿಸುವಂತೆ
ಬಳಲಿದಂತಹ ಬಗೆಯು ಸಂತವಿಸಿದೌ ಶಾಂತೆ
ಮುನ್ನ ಬಗೆಯಲಿ ಹಾಡ ನೀ—ನೀನೆ ಹೆತ್ತಿ
ನನ್ನ ನಾಲಗೆ ನಿನ್ನ ಬರಿ ಸೂಲಗಿತ್ತಿ
ಇಲ್ಲದಿರೆ ಹಾಡುವದು ನನ್ನ ಪಾಡೆ?
ಓ ಹಾಡೆ ! ಓ ಹಾಡೆ ! ಓ ಹಾಡೇ !

—ಅಂಬಿಕಾತನಯದತ್ತ

# ರಕ್ಷಿಸು ಕರ್ನಾಟಕ ದೇವಿ

ರಕ್ಷಿಸು ಕರ್ನಾಟಕದೇವೀ ಸಂ
ರಕ್ಷಿಸು ಕರ್ನಾಟಕ ದೇವೀ ॥ ಪಲ್ಲ ॥

ಕದಂಬಾದಿ ಸಂಪೂಜಿತ ಚರಣೆ
ಗಂಗಾರಾಧಿತ ಪದನಖ ಸರಣೆ
ಚಲುಕ್ಯರುತ್ತಮ ಕಾಂಚೀ ಕಿರಣೆ
ರಾಷ್ಟ್ರಕೂಟ ಮಣಿ ಕಂಠಾಭರಣೆ
ಚಾಲುಕ್ಯಾಂಶುಕ ಶೋಭಾವರಣೆ.

ಯಾದವಮಣಿ ಕಂಕಣಾಂಶು ಸುಂದರಿ
ಬಲ್ಲಾಳರ ಭುಜಭೂಷಣ ಬಂಧುರೆ
ವಿಜಯನಗರ ಮಂಗಲಮಣಿಕಂಧರೆ
ಮೈಸೂರೊಡೆಯರ ಸುಕೀರ್ತಿಮಂದಿರೆ
ಮಾಂಡಲಿಕಾವನ ಭಾರಧುರಂಧರೆ.

ಮತ ಸಂಸ್ಥಾಪಕ ಸ್ಥಾಪಿತಪ್ರಾಣೆ
ಶಿಲ್ಪಕಲಾಮಂಟಪ ಸುಸ್ಥಾನೆ
ಕವಿಜನ ಕೀರ್ತಿತ ಸುಯಶಸ್ತ್ರಾಣೆ
ಸಾಧು ಸತ್ಕಥಾ ಭೇರೀಧ್ವಾನೆ
ಸ್ವೇತಿಹಾಸಸೀರಾಜನ ರಾಣಿ.

—ಶಾಂತಕವಿ

# ಭಾರತದ ಗೀತೆಗಳು

‘ ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ ’ ಎಂಬು ಹೆಮ್ಮೆಯಿಂದ ಹೇಳುವ ಭಾರತೀಯರ ನಿತ್ಯ ಜೀವನವು ರಾಷ್ಟ್ರೀಯತೆಯು. ಹುಟ್ಟಾ ನಾಡವರೂ, ಭಾರತೀಯರೂ ಆದ ಕನ್ನಡಿಗರಿಗೆ, ನವ ಮನ್ವಂತರದ ರಾಷ್ಟ್ರೀಯತೆಯ ಗಾಳಿಯು ಸೋಂಕದೆ ಹೇಗೆ ಬಿಟ್ಟೀತು? ರಾಷ್ಟ್ರೀಯತೆಯಿಂದ ಮೈಮರೆತು, ಭಾರತ ಸ್ವಾತಂತ್ರ್ಯಕ್ಕಾಗಿ ಹಂಬಲಿಸಿ, ಕನ್ನಡ ಕವಿಗಳು ಹಾಡಿದ ರಾಷ್ಟ್ರೀಯ ಗೀತೆಗಳನ್ನೂ, ವೀರಗೀತೆ ಗಳನ್ನೂ ನಾವು ಇಲ್ಲಿ ಕಾಣಬಹುದು. ಸುಪ್ರಸಿದ್ಧ ಕವಿಗಳಿಂದ ಮೊದಲು ಮಾಡಿ ಅಪ್ರಸಿದ್ಧ ಕವಿಗಳ ವರೆಗೂ ಹಾಡಿದ ಅನೇಕ ರಾಷ್ಟ್ರೀಯ ಗೀತೆಗಳಿವೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ಆಯ್ದು ಇಲ್ಲಿ ಸಂಗ್ರಹಿಸಲಾಗಿದೆ.

# ನಮ್ಮದೀ ನಮ್ಮದೀ ಭರತಭೂಮಿ

ನಮ್ಮದೀ ನಮ್ಮದೀ ಭರತಭೂಮಿ ॥ ಪಲ್ಲ ॥
ಹೆರವರಂ ಸಂಬದಲೆ ಜಗದೀಶ್ವರಂ ತಾನೆ ।
ಧರಿಸಿ ನಾನಾವತಾರಂಗಗಳನ್ನು ॥
ಕರೆವ ಸರ್ವಸ್ವಮಂ ಧರೆಯು ಸಂರಕ್ಷಿಸುವ
ತೆರವ ಕಲಿಸಿದ ಪೂರ್ವಪಾಠಶಾಲೆ.

ಉಚ್ಚ ತತ್ವಾರ್ಥಗಳನಾಚರಿಸಿ ಲೋಕವಂ ।
ನೆಚ್ಚರಿಸಿ ದೇವರಿಚ್ಛಾಜ್ಯೋತಿಯಿಂ ॥
ಅಚ್ಚಳಿಯದೊಲು ಗೈದ ಸುಋಷಿಪದವೀಧರರು ।
ಸ್ವೇಚ್ಛೆಯಿಂ ನೆಲೆಗೈದ ಸುಕ್ಷೇತ್ರವು.

ಪದವೀಧರರ್ ಪೇಳ್ದ ಪದ್ಧತಿಗಳಂ ಬಿಡದೆ ।
ಸದಭಿಮಾನೈಕ್ಯ ಶೌರ್ಯೋತ್ಸಾಹದಿಂ ॥
ಉದಿತ ಸುಸ್ಫೂರ್ತಿಯಿಂದೆಮ್ಮ ಪೂರ್ವಜರಿದ್ದ ।
ಮುದದ ಭಾಗ್ಯದ ನಿಧಿಯು ಮಂದಿರವಿದು ॥

ದೇವಋಷಿ ಪೂರ್ವಜರುದಾತ್ತವೃತ್ತಿಪ್ರಭಾ ।
ಭಾವನಾಮೃತ ವೃಷ್ಟಿಯಿಂ ಬೆಳೆಯುವ ॥
ಭಾವಿಸುಖಸಾಮ್ರಾಜ್ಯವೆಂಬ ಸತ್ ಫಲಗಳಂ ।
ನೀವ ಸರ್ವೋತ್ಕೃಷ್ಟ ನಂದನವನಂ ॥

—ಶಾಂತಕವಿ

# ಭಾರತಾಂಬೆಯ ಮಹಿಮೆ

ಭಾರತವನುಳಿಯುತ್ತ ನನಗೆ ಜೀವನವೆತ್ತ ?
ಭಾರತವೆ ನನ್ನುಸಿರು, ನನ್ನೊಗೆದ ಬಸಿರು;
ಭಾರತವೆ ಧನಧಾನ್ಯ, ಭಾರತವೆ ಮನೆಮಾನ್ಯ,
ಭಾರತವೆ ದೇವಾರವೆನ್ನ ಸಂಸಾರ.

ಭಾರತದ ನೆಲಹೊಲವು ಸುರಭಿಯಿಳಿಕೆಚ್ಚಲವು,
ಭಾರತದ ತಿಳಿಜಳವು ಸೊದೆಯ ಸವಿ ಸೆಳವು;
ಭಾರತದ ಶ್ಯಾಮಲತೆ ತನುಮನಕೆ ಕಾಮಲತೆ,
ಭಾರತದ ಪಶುಪಕ್ಷಿ ವೈಚಿತ್ರ್ಯ ಸಾಕ್ಷಿ.

ಭಾರತದ ಸಕ್ಕದವು ಜ್ಞಾನನಿಧಿಯೊಕ್ಕದವು,
ಭಾರತದ ಪಲ ಮಾತೆ ಮೇಳವದ ಗೀತೆ;
ಭಾರತದ ಶುಭಚರಿತ ಧರೆಗೆ ಧರ್ಮದ ಕರೆತ,
ಭಾರತದ ತೋಳ್ಕಿಗಿಲು ಹಗೆಯ ಬಗೆದಿಗಿಲು.

ಭಾರತೀಯ ಸ್ವತಂತ್ರ ಸಾಧನವೆ ನಿಜ ಮಂತ್ರ,
ಭಾರತದ ಜಯಮೂರ್ತಿ ಮನ್ಮನಃಪೂರ್ತಿ;
ಭಾರತರ ಸೋದರಿಕೆ ನನ್ನ ದಿನದಿನದೆರಕೆ,
ಭಾರತ ಯಶೋಗಾನವೆನ್ನೆದೆಯ ತಾನ.

ಭಾರತದ ಮಂಗಲವು ಭುವನವಲ್ಲಭನೊಲವು,
ಭಾರತ ಸಮುಚ್ಛ್ರಯವು ಶಾಂತಿಗಾಶ್ರಯವು;
ಭಾರತದ ಜನಕುಲವು ಭುವಿಯ ಬಳಗಕೆ ಬಲವು,
ಭಾರತಾಂಬೆಯ ಭಕ್ತಿ ನನಗಾತ್ಮಶಕ್ತಿ.

—ಮಂ. ಗೋವಿಂದ ಪೈ

# ತಾಯ್ನಾಡು

ಆವ ಪುಣ್ಯಗರ್ಭದಿಂದ ನಿನ್ನ ಜನುಮವಾಯಿತೋ
ಆವ ದುಗ್ಧಧಾರೆಯಿಂದ ನಿನ್ನ ದೇಹ ಬೆಳೆಯಿತೋ
ಆವ ಸವಿಯ ಸೊಲ್ಲ ಕೇಳಿ ನಿನ್ನ ಬಾಸೆಯುದಿಸಿತೋ
ಆವ ನಾಡಿನಗಲದಲ್ಲಿ ಬಾಲಲೀಲೆ ಕಳೆಯಿತೋ
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

ಅಧರದಮರ ಸ್ವಾದುಸುಖವ ಅಧರ ತಿಳಿವುದಲ್ಲವೆ?
ಹೃದಯದಡಿಯ ಮೂಕಭಾವ ಹೃದಯವರಿವುದಿಲ್ಲವೆ?
ಕೆದರಿ ಕುರುಳ ಹರಿದು ಅರಳ ಪವಡಿಸಿರುವ ಮಾತೆಯಾ
ಪದವಿಹೀನ ದೀನ ಹೀನ ದಶೆಯನರಿಯದಾದೆಯಾ!
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

ನಾಡ ಭಾಷೆ, ನಾಡ ವೇಷ, ನಾಡ ಕಲೆಗಳೆಲ್ಲವು
ಕಾಡಪಾಲುವಾದುವಯ್ಯೊ ಬಾಡಿಹೋಯ್ತು ದೇಹವು.
ಮೂಢ ಹೊಳೆಯ ತಡಿಯೊಳಲ್ಲಿ ತೋಡುವಂತೆ ಕೂಪವಾ
ನಾಡ ನಾಡಿಯರಿವು ನಿನ್ನೊಳುಳಿಯದಾಯ್ತು, ಹಾ! ಶಿವ
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

ಒರತೆ ಬತ್ತಿ ಮಾಯವಾಗಲೆಂತು ನದಿಯು ನಲಿವುದು?
ಕೊರತೆ ಹೆಚ್ಚಿ ಕೊರೆಯೆ ಮನವ ಹರುಷವೆಂತು ಹರಿವುದು?
ಕರುಳು ಹರಿದು ಹಂಚಿಹೋಗೆ ನಲ್ಮೆನೆರಳು ಸುಳಿವುದೆ?
ಮರುಳ! ಒಡವನಾದ ಪರಿಯು ಬಗೆಗೆ ಹರಿಯದಿರುವುದೆ?
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

ರೀತಿ, ನೀತಿ, ಸಮತೆ, ಮಮತೆ, ಸಭ್ಯತೆಗಳ ಕಲಿಸಿದಾ
ಪೂತ ಆರ್ಯ ಸಂಸ್ಕೃತಿಯನು ರಕ್ತದೊಳಗೆ ಬೆರಸಿದಾ
ಮಾತೆಯಮಲ ಕೀರ್ತಿಕೇತು ಹಾರುತಿರಲಿ ಸರ್ವದಾ
ಮಾತೃಪಾದತಲದ ಪುಣ್ಯರಜವ ಸೇವಿಸೈ ಸದಾ
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

"ಮಾತೆ! ಮಾತೆ!" ಕರೆದೊಡೇನು ಪ್ರೀತಿಭಾವವಾಯಿತೇ?
"ಮಾತೆ ಜಯತು" ಕೂಗಲೇನು ದೇಶದೇಳ್ಗೆಯಾಯಿತೇ?
ಜಾತಿಭೇದ ಸ್ವಾರ್ಥಭಿತ್ತಿಯೆಂದೊಡೇನು ತೀರಿತೇ?
ಮಾತೃಋಣದ ಭಾರದಿಂದ ನಿನಗೆ ಮುಕ್ತಿ ದೊರೆಯಿತೆ?
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ?

## ತಾಯ್ನಾಡು

ಕರ್ಮಭೂಮಿಯಲ್ಲಿ ಮನುಜಜನ್ಮ ತಳೆದ ಮಾನವ !
ಕರ್ಮನಿರತನಾಗಿ ಸೇರು ಪುಣ್ಯ ಶಾಂತಿಧಾಮವ !
ಕರ್ಮಹೀನ ಮಾನವನಿಗೆ ಮುಕ್ತಿಮಾರ್ಗ ದೊರೆವುದೆ ?
ಧರ್ಮಹೀನ ದರ್ಪಣದಲಿ ಮೊಗದ ಸೊಬಗು ತಿಳಿವುದೆ ?
ಮರೆತುಬಿಟ್ಟೆ ಮಾತೆಯಾ !
ಗುರುತುಗೆಟ್ಟೆ ಮಮತೆಯಾ !

ವಿಶ್ವಚಿತ್ರ ಅತಿವಿಚಿತ್ರ, ವಿಮಲ ಕಮಲ, ಸದೃಶವು;
ವಿಶ್ವವನದ ವಿಹಗತತಿಯೊಳಿಲ್ಲ ವೈರಭಾವವು.
ನಶ್ವರನೆಲೆ ಮನುಜ ! ನೀ ನಿಸರ್ಗದೇವಿ ವೀಣೆಯಾ
ವಿಶ್ವರಾಗರಸವ ಕುಡಿದು ಅಮರನಾಗಿ ಬಾಳಯ್ಯಾ !
ಮರೆತುಬಿಟ್ಟೆ ಮಾತೆಯಾ !
ಗುರುತುಗೆಟ್ಟೆ ಮಮತೆಯಾ !

ತಾರಗೆಯನು ಕಂಡು ದಾರಿಗೆಟ್ಟು ದಣಿದ ಪಥಿಕಗೆ
ದಾರಿದೋರು ನೀರಧಾರೆಯನ್ನು ಕಂಡ ಜೀವಿಗೆ
ತೋರು ಕರ್ಮಪಥವ, ಕಲಿಸೊ ಮಿಂಚಿನಿಂದ ಮಿರುಗಲು
ಕಾರ ಕತ್ತಲೆಯನು ನೀಳಿ ಧೈರ್ಯಗೆಡದೆ ಹರಿಯಲು
ಮರೆತುಬಿಟ್ಟೆ ಮಾತೆಯಾ !
ಗುರುತುಗೆಟ್ಟೆ ಮಮತೆಯಾ !

ಧೂಳಿ ಪಾದತಳದಿ ಬಿದ್ದು ಹೊರಳಿ ನರಳಿಯುಳುವುದು
ಗೋಳ ಕೇಳಿ ಗಾಳಿಯಿಳಿದು ತಬ್ಬಿಯುದ್ಧರಿಸುವುದು.
ಬಾಳ ಸವೆಸು ದೀನದಳಿತರೂಳಿಗದಲಿ ಮುದದೊಳು
ತೋಳ ತಳ್ಕೆಯಿಂದಲಾಗ ತಾಯಿ ತಬ್ಬಿ ತಣಿವಳು.
ಉದ್ಧರಿಸ್ಯೆ ಮಾತೆಯಾ !
ಬಿದ್ದಿರುವಾ ಮಾತೆಯಾ !

—ದಿವಂಗತ ಕೆ. ರಾಘವಾಚಾರ್

# ಭರತಭೂಮಿಯ ಉದರದೊಳಗೆ ಜನಿಸಿದೆವು

ಭರತಭೂಮಿಯ ಉದರದೊಳಗೆ ಜನಿಸಿದೆವು
ಭರತಭೂಮಿಯ ಕೋಟದೊಳಗೆ ಬೆಳೆದಿಹೆವು
ಭರತಭೂಮಿಯ ಸಿರಿಯ ನೋಡಿ ಹಾಡುವೆವು
ಭರತಭೂಮಿಯ ಭಾಷೆಯೊಳಗೆ ನುಡಿಯುವೆವು.

ಭರತಸೂರ್ಯನ ಬೆಳಕು ನೋಡಿ ಹಾರುವೆವು
ಭರತಚಂದ್ರನ ಬೆಳಕು ಹಾಡಿ ಕುಡಿಯುವೆವು
ಭರತನಕ್ಷತ್ರಗಳ ಬೇಡಿ ಆಡುವೆವು
ಭರತರಾತ್ರಿಯನು ಕುಣಿದಾಡಿ ಕಳೆಯುವೆವು.

ಭರತಭೂಮಿಯ ನದಿಗಳೊಳಗೆ ನಲೆ ಮಿಂದು
ಭರತಭೂಮಿಯ ಪರ್ವತದ ಮೇಲೆ ಬಂದು
ಭರತಭೂಮಿಯ ಕೀರ್ತಿಯುಕ್ಕುತಿರಲೆಂದು
ಭರತಭೂಮಿಯನು ಹರಿಸುವೆವು ನಾವಿಂದು.

ಹಾ ಮಾತೆ! ದಾಸ್ಯದೊಳು ನೋಡಿ ನಿನ್ನನ್ನು
ಸೋಮಾರಿತನವ ಬಿಸುಟುವೆವು ನಾವಿನ್ನು
ಸಾಮಗಾಯನದಂಥ ಕುಡಿದು ರಸವನ್ನು
ಪ್ರೇಮದಿಂ ಪಾಡುವೆವು ನಿನ್ನ ಗುಣಗಳನು.

ದಾಸ್ಯವೆಂಬುವ ವಿಷವು ಕುದಿಯುತ್ತಲಿರಲು
ಆಸ್ಯದಿಂ ಹೀರುವೆವು ಬರಲಿ ಸನುಗುರಲು
ದಾಸ್ಯವೆಂಬುವ ವಿಷವು ಉರಿಯುತ್ತಲಿರಲು
ಹಾಸ್ಯದಿಂ ಹಾರುವೆವು ತಾಯೆ ನೀನಿರಲು.

—ಶ್ರೀಧರ

# ಭರತಮಾತೆಯ ಪ್ರಾರ್ಥನೆ

‹ದಾಟಿ:- ಇಂದು ನಾ ನಂಬಿದೆ ನಿನ್ನ›

ಭರತ ಮಾತೆಯೆ, ಭರತ ಮಾತೆಯೆ ಎಂದು ನೀಂ ತಲೆಯೆತ್ತುವೆ ?
ಎಂದು ಲೋಕದ ಜನರ ಹೃದಯದಿ ನಿನ್ನ ಮಹಿಮೆಯ ಬಿತ್ತುವೆ ?
ಎಂದು ಮಲಿನತೆ ನೀಗುವೆ—ಮಗು-
ಳ್ದೆಂದು ನಗುಮುಖಳಾಗುವೆ ?

ಎಲ್ಲಿ ಧರ್ಮವ ಕಂಡು ಸಾರಿದ ನಿನ್ನ ಪೂರ್ವದ ಋಷಿಗಳು ?
ಎಲ್ಲಿ ಘನತೆಯ ಒದುಕ ಹಾಡಿದ ನಿನ್ನ ಸತ್ವದ ಕವಿಗಳು ?
ಎಲ್ಲಿ ಧರ್ಮದ ಧಣಿಗಳು—ಅವ-
ರೆಲ್ಲಿ ಜ್ಞಾನದ ಕಣಿಗಳು ?

ಎಲ್ಲಿ ಕಲೆಗಳ ಬೆಳಸಿ, ಲಕ್ಷ್ಮಿಯನೊಲಿಸಿ, ನಿಲಿಸಿದ ಧೀರರು ?
ಎಲ್ಲಿ ರಾಜ್ಯವ ಕಟ್ಟಿ ಶಾಂತಿಯ ಪ್ರಜೆಗೆ ಬೀರಿದ ವೀರರು ?
ಎಲ್ಲಿ ಆರ್ಯರ ರಾಜರು ?—ಈ-
ಗೆಲ್ಲಿ ಸಾಹಸತೇಜರು ?

ಭರತಮಾತೆಯೆ, ಭರತಮಾತೆಯೆ, ನಮ್ಮ ಹಂಬಲು ಕೇಳದೆ ?
ದೇವಿ, ಮೌನವಿದೇಸು, ಭಕ್ತರು ನಮಗೆ ನೀತಿಯ ಹೇಳದೆ ?
ಎಂದು ಸೆರೆಯನು ತಳ್ಳುವೆ —ಹೇ-
ಳೆಂದು ಬಿಡುಗಡೆಗೊಳ್ಳುವೆ ?

—ಶ್ರೀ.

# ನಾಡತಾಯಿ

**ಸಾರಂಗ**

ಸ್ವರ್ಗ ಮರ್ತ್ಯ ಪಾತಾಳ
ಮೂಲೋಕವು ಮೊಳಗಿಹುದು, ಅಳುಕಿಹುದು, ತುಳುಕಿಹುದು
ಭಾರತೀಯ ಸ್ವಾತಂತ್ರ್ಯ
ಸಾಮ್ರಾಜ್ಯವೇಳುತಿರೆ – ತಲೆಯೆತ್ತಿ ನಿಲ್ಲುತಿರೆ, ಗೆಲ್ಲುತಿರೆ.

ಸಾವಿರ ಸಂವತ್ಸರ ಸಂ-
ಕೋಲೆಯ ಗೋಳಾಟದ ಬೀಳಾಟದ ಕಾಟದಲಿ–
ಸ್ವಾಧೀನತೆ ಉರಿದೆದ್ದು
ಕೋಳದ ಬಿಗಿ ಸಡಲುತಿರೆ, ಕದಲುತಿರೆ, ಬಿಡುತಲಿರೆ.

ಕೋಟ್ಯಂತರ ಸೋದರ್ಕಳು
ಕೂರಾಳ್ಗಳು ಕಿಡಿಕಾರುತೆ ನಡೆಯುತಿರೆ, ನುಗ್ಗುತಿರೆ-
ನಾಡೆಮ್ಮದು ಸ್ವೈಯೆನ್ನುತೆ
ತೋಳ್ತಟ್ಟಿರೆ, ಸಾಲಿಟ್ಟಿರೆ, ಜೈಯೆನ್ನುತೆ ಘೀಳಿಟ್ಟಿರೆ.

ವೈಭವ ಸಿರಿ ಬಾಳೆಲ್ಲ
ಈಯೆಡೆಯೆ, ತಾಯೆಡೆಯೆ, ನಾಡೆಡೆಯೆ, ಬೀಡೆಡೆಯೆ-
ಸ್ವರ್ಗ ಮೋಕ್ಷ ಸಾಯುಜ್ಯ
ಬೇರೊಂದೆಡೆ ಕಾಣದಿವೆ – ಈ ಒಂದೆಡೆ ಸೇರುತಿವೆ.

ಈ ತಾಯಿಯೆ ಮಾತಾಯಿಯು
ಉಸುರೀವಳು, ಕಿಸುರೀವಳು, ಕಸುವೀವಳು, ಬಿಸುಪೀವಳು-
ಬಾಳಿನೆಲ್ಲ ಕಾಳಗದಲಿ
ಋತಿಯೀವಳು, ಗತಿಯೀವಳು, ಮತಿಯೀವಳು, ಧೃತಿಯೀವಳು.

—ಎಲ್ಲ ಕುಲದ ತಾಯಿ
ಮೆಲ್ನುಡಿಗಳ ತಾಯಿ
ಚೆಲ್ವ ನಡೆಯ ತಾಯಿ
ಸೌಭಾಗ್ಯ ದಾಯಿ.

—ವಿ. ಸೀ.

## ಭರತಮಾತೆ

ಅಯ್ಯೋ ನಾನೆ ತಿಳಿಯದಂತೆ
ನನಗೆ ಮುಕ್ತಿ ದೊರಕಿತಂತೆ!
  ಎಂಥ ಮುಕ್ತಿಯೋ ?—ಅದು
  ಎಂಥ ಮುಕ್ತಿಯೋ !

ಮೈಯಲುಗಿಸ ಬಾರದಂತೆ;
ಕೈಯಲುಗಿಸ ಕೂಡದಂತೆ;
ಪಕ್ಕದೊಳಿರುವಕ್ಕನೊಡನೆ
ನುಡಿಯೆ ಹಕ್ಕೆ ಇಲ್ಲವಂತೆ!
ಅಂತು ನನಗೆ ಮುಕ್ತಿಯಂತೆ!
  ಎಂಥ ಮುಕ್ತಿಯೋ ? – ಅದು
  ಎಂಥ ಮುಕ್ತಿಯೋ !

ಸರಪಣಿಗಳು ಎಂದಿನಂತೆ
  ಮೆಯ್ಯ್ಸುತ್ತಿವೆ !
ಕಬ್ಬಿಣವದು ಕಾಣದಂತೆ
  ಹೂವು ಮುತ್ತಿವೆ !
ಹೊಟ್ಟೆ ಬರಿದು; ಹಿಟ್ಟೆಯಿಲ್ಲ.
ಮೈ ಬೆತ್ತಲೆ; ಬಟ್ಟೆಯಿಲ್ಲ.
ನನ್ನ ನಾನೆ ಪೊರೆಯುವಂತೆ
ನನಗೆ ಶಕ್ತಿ ದೊರಕಿತಂತೆ!
  ಎಂಥ ಶಕ್ತಿಯೋ ? – ಅದು
  ಎಂಥ ಶಕ್ತಿಯೋ !

## ಭರತಮಾತೆ

ಮೊಗದೊಳೆಸಕ ಮಿಂಚಲಿಲ್ಲ ;
ಕಣ್ಗೆ ಹೊಳಪು ಬಾರಲಿಲ್ಲ ;
ಬಾಳಿಗೋ ಬೆಳಕೆ ಇಲ್ಲ ;
ಏನೆಂತೋ ಕೇಳ್ವರಿಲ್ಲ !
ನನಗೆ ಸಿರಿಯು ಬಂದಿತಂತೆ
ನಾನೆ ಅದನು ಅರಿಯೆನಂತೆ !
ಎಂಥ ಸಿರಿಯದೋ ? – ಅಯ್ಯೋ
ಎಂಥ ಸಿರಿಯದೋ !

ತಲೆಯ ಹೊರೆಯು ಇಳಿಯಲಿಲ್ಲ ;
ಎದೆಯ ಬೇನೆ ಅಳಿಯಲಿಲ್ಲ ;
ಅಡಿಯ ಬೇಡಿ ಒಡೆಯಲಿಲ್ಲ ;
ದುಡಿವ ದಾಸ್ಯ ಬಿಡಲೆ ಇಲ್ಲ !
ನನ್ನ ಸುತ್ತ ಮುತ್ತ ಮುತ್ತಿ
ನಿಂತಿರುವರು ಕತ್ತಿಯೆತ್ತಿ !
ಅಂತು, ನಾನೆ ತಿಳಿಯೆನಂತೆ !
ನನಗೆ ಮುಕ್ತಿ ದೊರಕಿತಂತೆ !
ಎಂಥ ಮುಕ್ತಿಯೋ ? – ಇದು
ಎಂಥ ಮುಕ್ತಿಯೋ !

ನನ್ನ ನಾಳ್ವನೊಡ್ಡಿದ ಬಲೆ ! – ಇದು
ಬರಿ ಕುಯುಕ್ತಿಯೋ !

—ಕೆ. ವಿ. ಪುಟ್ಟಪ್ಪ

# ನಾವು ಭಾರತೀಯರು

ಭಾರತೀಯರು ನಾವು ಭಾರತೀಯರು;

ಮಲೆತು ನಿಂತ ವೈರಿಗಳನು
ಗೆಲಿದು ನನ್ನಿ ನಲುಮೆಯಲಿಯೆ
ಚೆಲುವಿನಿಂದೆ ಇಳೆಯನಾಳಿ
ಬಲುಹುಗಾರರೆಂದು ನಲಿದ
ಭಾರತೀಯರು ನಾವು ಭಾರತೀಯರು ;

ಭೋಗಗಳಿಗೆ ಸೀರಸೀಡಿ
ತ್ಯಾಗದಲಿಯೆ ಭೋಗ ನೋಡಿ
ಯೋಗೀಶ್ವರನೊಡನೆ ಬೆರೆಯೆ
ಯೋಗಪಥವ ಕಂಡುಹಿಡಿದ
ಭಾರತೀಯರು ನಾವು ಭಾರತೀಯರು ;

ಜಗದೊಡೆಯನ ನೆಲೆಯರಿಯದೆ
ಜಗದ ಜನರ ಜಂಗುಳಿಗಳು
ವಿಗಡವಾಗಿ ತೊಳಲುತಿರಲು
ಒಗೆಯ ಮುಗಿಲೊಳಗೆಯೆ ಕಂಡ
ಭಾರತೀಯರು ನಾವು ಭಾರತೀಯರು ;

ಭಾವನೆಗಳ ಕೊಳಲನೂದಿ
ಭಾವರಾಗಗಳನೆ ಹಾಡಿ
ದೇವರಾಯನೊಡನೆ ಆಡಿ
ಸಾವನೋವ ತುಳಿದುನಿಂತ
ಭಾರತೀಯರು ನಾವು ಬಾರತೀಯರು.

— ಆನಂದಕಂಡ

# ಭರತಭೂಮಿಯ ದುರವಸ್ಥೆ

**ರಾಗ: ಕಾಂಬೋದಿ ಝಂಪೆತಾಳ**

ಕಂಡ ಮೇಲಾದರೂ ಕಣ್ದೆರೆಯದಿಹರೇ । ಪಲ್ಲ ।
ಉದ್ದಂಡ ಭಾರತದ ದುರ್ದೆಶೆಯ ಕಣ್ಣಾರೇ ॥ಅ. ಪ॥

ಅಂಗ ವಂಗ ಕಳಿಂಗ ಮೊದಲಾದ ತುಂಗವಿಭ । ವಂಗಳಿಂ
ಮೆರೆವ ದೇಶಂಗಳಿಂದ ॥ ಕಂಗೊಳಿಸುತಿರ್ದ ಭಾರತವಿಂದು ಪರದೇಶ-।
ದಾಂಗಲೇಯರ ಹಂಗಿನೊಳು ಬಳಲುತಿಹುದಾ ॥

## ಭರತಭೂಮಿಯ ದುರವಸ್ಥೆ

ವೇದಘೋಷಗಳು ಸ್ಮೃತಿಬೋಧಗಳು ಪುಕಥಾನು । ವಾದಗಳು ನ್ಯಾಯಾದಿ ಶಾಸ್ತ್ರಂಗಳಾ ॥ ಬೋಧಗಳು ಕಾವ್ಯದ ವಿನೋದಂಗಳೆಲ್ಲ ಪರ-ರಾಧಿಪತ್ಯದಿ ಮಾಯವಾದುವಿಂತಕಟಾ ! ॥

ಹೊನ್ನು ಬೆಳೆಯುವ ಖನಿಯು ರನ್ನದಾಗರ ಲೋಕ । ಮಾನ್ಯರು-
ದ್ಭವಿಸಿದಾ ಮಾಹಾತ್ಮರೂ॥ ಜನ್ಮಿಸಿದ ಘನ್ನಸಂಪನ್ನ ಭಾರತವಿಂದು
ಗನ್ನಘಾತಕರಲ್ಲಿ ಬನ್ನಬಡುತಿಹುದಾ ॥

ಸುತ್ತಲೂ ಹಲವು ವಿಧದಿಂದ ಭಾರತದ ಸಂ । ಪತ್ತು ಪರದೇಶ-
ಕೈದುವುದಲ್ಲದೆ ॥ ಎತ್ತ ಪೋದರು ಬ್ರಹ್ಮಹತ್ಯೆಯಂತೆಲ್ಲರನು ।
ವೃತ್ತಿತೇರಿಗೆಯು ಬೆಂಬತ್ತಿ ಬರುವುದನೂ ॥

ಚರಕವನು ಬಿಡದೆ ಪರದೇಶ ವಸ್ತುಗಳ ಕಡೆ। ತಿರುಗದೇ ದೇಶೀಯ
ವ್ರತವ ಧರಿಸಿ ॥ ವರುಷವೊಂದಕೆ ಬಟ್ಟೆಯೊಂದರೊಳು ಪರದೇಶ- ।
ಕರುವತ್ತುಕೋಟಿ ಪೋಗುವದ ಪ್ರತ್ಯಕ್ಷಾ ॥

ಉಡುವುದೂ ಪರದೇಶಿ ತೊಡುವುದೂ ಪರದೇಶಿ । ನುಡಿವುದೂ ಕುಡಿವುದೂ ಪರದೇಶಿಯೂ ॥ ಕೊಡುವುದು ಕೊಂಬುದೂ ಪರದೇಶಿ ಪರದೇಶಿ । ಯೊಡನಾಟದಿಂದ ಪರದೇಶಿಯಾದುದನೂ ॥

ಭಾರತೋದ್ಧಾರದೊಳುದಾರತೆಯನಾಂತು ಗೃಹ । ದಾರಾಪ್ತಸುತರ ಪರಿಹಾರಮಾಡಿ ॥ ಧೀರಭಾವದಿ ಕಾರ್ಯಭಾರವನು ಬಿಡದಿಸಿತು ಕಾರಾಗೃಹದೊಳಿಹ ಗಭೀರ ಚರಿತರನೂ ॥

ಏರುವುದು ಸ್ವಾರ್ಥ ಪರಿಹಾರ ರಥವನು ಸತ್ಯ। ಸಾರಥಿಯು ನೆರೆದ-ಸಹಕಾರವೆಂಬಾ ॥ ಕೂರಸಿಯಹಿಂಸಾಖ್ಯ ಧಾರೆಯಿಂ ರಿಪುಗಳ ನಿ- । ವಾರಿಸಲು ಕಾಂಗ್ರೆಸ್ಸು ಸಾರಿ ಪೇಳ್ವುದನೂ ॥

—ದಿವಂಗತ ಎಂ. ಎನ್. ಕಾಮತ

# ಮಾತೃಭೂಮಿ ಜನನಿ

ಮಾತೃಭೂಮಿ ಜನನಿ ನಿನ್ನ ಚರಣಸೇವೆ ಮಾಡುವಾ ।
ಪರಮ ಹರುಷದಿಂದ ನಿನ್ನ ಸುಖಕೆ ಪ್ರಾಣನೀಡುವಾ ॥ ಪಲ್ಲ ॥

ತನು–ಮನ-ಧನದಿಂದ ನಿನ್ನ ಘನತೆಯನ್ನು ಬೆಳೆಸುವಾ ।
ದಣಿಯದೆ ಅನುದಿನವು ದುಡಿದು ಗುಣಿಗಳೆನಿಸಿಕೊಳ್ಳುವಾ ॥

ಹಿಂದುಮಾತೆ, ಬಂಧುಭಾವದಿಂದ ನಿನ್ನ ಮಕ್ಕಳು ।
ಒಂದುಗೂಡಿ ಪಾರತಂತ್ರ್ಯ ಬಂಧವ ಹರಿದೊಗೆವೆವು ॥

ಕೆಟ್ಟಗಣ್ಣಿನಿಂದ ನೋಳ್ಪ ದುಷ್ಟ ಜನರಿಗಂಜದೆ ।
ದಿಟ್ಟತನದೊಳೆಲ್ಲರೊಟ್ಟುಗೂಡುತಿಹೆವು ಕಷ್ಟಕೆ ॥

—ದಿವಂಗತ ವಲ್ಲಭ ಮ. ತಟ್ಟಿ

# ಭಾರತಮಾತೆಯ ಸ್ತೋತ್ರ

**ರಾಗ: ಕಲ್ಯಾಣಿ ರೂಪಕತಾಳ**

ಜನನೀ ಭಾರತಭೂಮಿ, ಕಲ್ಯಾಣೀ ಪ್ರಣಮಾಮಿ ॥ ಪಲ್ಲ ॥

ಮುನಿಜನಸೇವಿತೆ ಪೂಜಿತೆ । ಅನಘೇ ಅನಿಮೇಷಮಾತೆ ।
ಧನದಾತೇ ಧಾನ್ಯಯುತೇ । ಘನಚರಿತೇ ದಿವ್ಯಭೂಮಿ ॥

ಕಲ್ಪತರೂ ಪಾರಿಜಾತ । ಬಿಲ್ವ ತುಲಸಿ ಕದಳಿ ಚೂತ ।
ಗುಲ್ಮಲತಾ ನದಿ ಪರ್ವತ । ಶೋಭಿತೆ, ಸೌಭಾಗ್ಯಭೂಮಿ ॥

ಸೂರ್ಯಚಂದ್ರಕುಲರಾಜರ । ವೀರ್ಯಪಾಲಿತಾಖಿಲಾಮರ ।
ಸಾರ್ವಭೌಮನವತಾರದ । ಕಾರ್ಯರಂಗ, ಆರ್ಯಭೂಮಿ ॥

ದಾರುಣ ಸಂಗರದಲಿ ಕುಲ । ಗೌರವ ಕಾಪಾಡುವ ಛಲ ।
ಮೀರಿದ ಯೋಧರ ಸಂತಾ-। ನಕೆ ಧಾತ್ರೀ ವೀರಭೂಮಿ ॥

ಜನ್ಮವನುದ್ಧರಿಸಿಕೊಳಲು । ನಿರ್ಮಲಗರ್ಭಾಶಯದೊಳು ।
ನಮ್ಮನು ಹೊರುತಿಹ ಪಾವನ । ಕರ್ಮರಂಗ, ಪುಣ್ಯಭೂಮಿ ॥

—ದಿವಂಗತ ಎಮ್. ಎನ್. ಕಾಮತ

# ನಮ್ಮ ಭಾರತವರ್ಷ !

**ರಾಗ : ಕಾಂಬೋದಿ, ತಾಳ ಝಂಪೆ**

ನಮ್ಮವರು ನಾವು ನಮ್ಮದು ಭರತವರ್ಷ
ಸುಮ್ಮನೆ ಪಡಕು ಮತ್ಸರ ಜಾತಿ ದ್ವೇಷಾ ॥ ಪಲ್ಲ ॥

ಸಿಂಧು ಪಂಜಾಬ ಪರ್ಹಾಡ ಕಾಶ್ಮೀರವಾ
ಬಂಗಾಳವಾಸ್ಸಾಮ ಬ್ರಹ್ಮದೇಶ ।
ಮುಂದೆ ಮಹಾರಾಷ್ಟ್ರ ಗುಜರಾಥ ಕರ್ನಾಟಕವಿ-
ದೆಂದು ಮದ್ರಾಸ ಸಿಂಹಲದ್ವೀಪ ಕೂಡಿ ॥

ಹಿಂದುಗಳು ಗಾಂಧಿಗಳು ಒಂದಲ್ಲದೇಕಿನ್ನು
ಹಿಂದು ಮಹಮ್ಮದಿ ಪಾರ್ಸಿ ಕ್ರೈಸ್ತರ್‍ಯಹುದಿ ।
ಸಂದೇಹವೇನಿದಕೆ ಹಿಂದುಮಾತೆಯ ಸುತರು
ನಂದನರು ನಾವೆಲ್ಲ ಬಂಧು ಬಾಂಧವರೂ ॥

## ನಮ್ಮ ಭಾರತವರ್ಷ

ವೀರಶೈವರು ತಾವು ದೂರವೆಂದೆನ್ನುವರು
ವೀರವೈಷ್ಣವ ಸ್ವಾರ್ಥ ಬ್ರಾಹ್ಮಣೇತರರೂ ।
ದಾರಿಯನು ತೋರಿಸುವ ಗಾಂಧಿ ಮತವನು ಬಿಟ್ಟು
ಬೇರೆ ಬೇರೆಂತೆಂದು ವಾರಿ ನೋಡುವರು ॥

ಸತ್ಯದಲಿ ಒಳಿಸುತಿಹ ಉಪ್ಪು ಕಟ್ಟಿಗೆ ಚೂರು
ಭತ್ತ ಸುಚ್ಚುಂಗಳಿಗೆ ದಾರಿದ್ರ್ಯವೂ ।
ಅತ್ತೆ ಸೊಸೆಯನು ಬೈದು ಫಲವೇನು
ನಾವೆಲ್ಲರೊಟ್ಟಾಗಿ ಸತ್ಯಮಾತೆಯ ಮಕ್ಕಳೆನಿಸೀ ॥

ಅವರ ಕಂಡರೆ ದ್ವೇಷ ಇವರ ಕಂಡರೆ ದ್ವೇಷ
ಭವನದೊಳಗಣ ಅಣ್ಣ ತಮ್ಮರ ದ್ವೇಷವೂ ।
ನವ ನವೀನರು ಬಂದು ಸೆರೆಯುವರ ಸುಲಿದೊಯ್ಯೆ
ದ್ವೇಷವಿಲ್ಲದೆ ಮಂದಹಾಸರಾಗುವೆವೂ ! ॥

ಹೊಟ್ಟೆಗಿಲ್ಲದ ದೇಶವೆನಿಸುತೀ ಭಾರತವು
ರಟ್ಟೆಯೊಳಗಿಲ್ಲ ದುಡಿಯುವ ಶಕ್ತಿಯು ।
ಕೊಟ್ಟೆನೆಂಬುವರಿಲ್ಲ ಕೆಟ್ಟೆನೆಂಬವರೆಲ್ಲ
ಇಷ್ಟಾದರೊಟ್ಟುಗೂಡುವ ಬುದ್ಧಿಯಿಲ್ಲ! ॥

ಭಂಗಾರ ಹೊಳೆಯುತಿದ್ದ ಸಿದ್ಧನಗರದ ಭೂಮಿ
ಭಂಗಾರ ಹೊಗಿಯುತಿಹ ಹಿಂದುಸ್ಥಾನ ।
ಕಂಗೆಡುವ ಕಾರಣವು ಇಂಗಿತವ ಕೂಡದಲೆ
ಮುಂಗಾಣದಿರುವದೆ ಮಂಗದೋಷಾ ॥

—ದಿವಂಗತ ಎಂ. ಎಸ್. ಕಾಮತ

# ಭಾರತ ತಪಸ್ವಿನಿ

ವೇದ ಋಷಿ ಭೂಮಿಯಲಿ ನಾಕನರಕಗಳಿಂದು
 ಸಾವು ಬದುಕಿನ ಕಟ್ಟಕಡೆಯ ಹೋರಾಟದಲಿ
 ಸಂಧಿಸಿವೆ. ಮಾನವನೆದೆಯ ಕಾಳಕೂಟದಲಿ
ಅಮೃತವನೆ ಹಾರೈಸಿ ಬಲಿರಕ್ತದಲಿ ಮಿಂದು
ಕಾದಿಹೆವು ಕಣ್ಣೀರು ತುಂಬಿ. ನಾಗರಿಕತೆಯು
 ನಾಗಿನಿಯು ಪ್ರಗತಿನಾಮಕ ಫಣೆಯ ಮೇಲೆತ್ತಿ
 ಚುಂಬಿಸಿಯೆ ಕೊಲ್ಲಲೆಳಸುತಿದೆ.—ಹಿಂದಿನ ಬುತ್ತಿ
ಸಮೆಯುತಿದೆ. ಇಂದಿನ ಮಹಾತಪಸ್ವಿನ ಚಿತೆಯ
ರಕ್ತಿಮ ವಿಭೂತಿಯೊಳೆ ಮುಂದಿನ ನವೋದಯದ
 ಧವಳಿಮ ಪಿನಾಕಧರನೈತಹನು : ಮತ್ತೊಮ್ಮೆ
 ಭಾರತಾಂಬೆಯು ಜಗದ ಬೆಳಕಾಗುವಳು; ಹೆಮ್ಮೆ
ಗೌರವಗಳಿಂದ ಜನಗಣದ ಕಟು ನಿರ್ದಯದ
 ಲೋಭಬುದ್ಧಿಯ ಹೀನ ಕುಟಿಲತೆಯನುರೆ ನೀಗಿ
 ಮೆರೆವಳು ತಪಸ್ವಿನಿಯೆ ಚಕ್ರವರ್ತಿನಿಯಾಗಿ!

—ಕೆ. ವಿ. ಪುಟ್ಟಪ್ಪ

## ಭಾರತವರ್ಷ

ಓ ನನ್ನ ತಾಯೆ, ಭಾರತವರ್ಷವೇ, ನಿನ್ನ
ಪೂರ್ವದೈಶ್ವರ್ಯವನು ನೆನೆಯೆ ನನ್ನೆದೆಯುಬ್ಬಿ
ಹೆಮ್ಮೆಯಲಿ ಬೀಗುವುದು; ಒಡನೆ ಮನದಲಿ ಮಬ್ಬ
ಕವಿಸುವುದು ದೇವಿ ಈ ಬಾಳಿನಿಂದಿನ ಬನ್ನ.
ಅಂದು ಮುಗಿಲನು ಮುಟ್ಟಿ ಮೂರು ಲೋಕದ ಕಣ್ಣು
ತನ್ನೆಡೆಗೆ ಸೆಳೆದು, ಸ್ವರ್ಗವನು ಭೂಮಿಗೆ ದತ್ತು
ಮಾಡಿತಂದಾ ನಿನ್ನ ನೂರ್ಮೊಗದ ಸಂಪತ್ತು
ಏನಾಯಿತೌ? ಎತ್ತಹೋಯ್ತು ಕೀರ್ತಿಯಜೊನ್ನ?
ಮರಳಿ ಬರುವುದು ಎಂದು ತಾಯೆ ಆ ಸಿತಪಕ್ಷ?
ಅಂದಿನವೊಲೆಂದು ನೀ ಮರಳಿ ನಿನ್ನೀ ಹಸಿದ
ಮಕ್ಕಳನು ಜಸದ ಬೆಳುದಿಂಗಳಲಿ ಕುಳ್ಳಿರಿಸಿ
ಆ ಶಾಸ್ತ್ರ ಸಂಗೀತ ಕಾವ್ಯ ಕಲೆಗಳ ರಸದ
ಸವಿತುತ್ತನುಣಿಸುವೆ? ಎಂದು ಹಾಕುವೆ ರಕ್ಷೆ
ಎಂದೆಂದಿಗೂ ಸುಖಿಸಿ ಎಂದು ನಮ್ಮನು ಹರಸಿ?

—ಶ್ರೀನಿವಾಸ

# ಮುನಿದ ಭಾರತ

ಗ್ರೀಕರ ಪುರಾಣದೊಳು ದೇವೇಂದ್ರ ಜ್ಯುಪಿತರನು
ಪಾತಕವ ಗೈದ ತನ್ನಣುಗನಿಗೆ ಈ ತೆರದಿ
ಯಾತನೆಯ ವಿಧಿಸಿದ್ದನೇವೇಳ್ವೆ: ನಾಲಗೆಗೆ
ಸೋಕುವೊಲು ಜೋಲುತಿರೆ ತನಿರಸದ ಹಣ್ಗೊಂಪೆ,

ಇವನ ಹಸಿವಿವನನೇ ತಿನ್ನುತಿದೆ; ಬಳಿಯೊಳೇ
ಜಳಜಳನೆ ತುಂತುರನು ಸಿಂಪಿಸುತ ಹರಿಯುತಿರೆ
ತಿಳಿವೊನಲು, ಪ್ರಾಣವನೆ ಹೀರುತಿದೆ ನೀರಡಿಕೆ; –
ಇವು ಸಿಲುಕಿ ನಿಲುಕದೊಲು ಶಾಪ ಕಟ್ಟಿದೆ ಇವನ.

ಅಂದಿನೀ ಕತೆ ಪಾಡೆ ದಿಟವಾಗೆ, ಭಾರತವೆ,
ಆವ ಪಾತಕಕಾಗಿ ನಿನ್ನ ಮಕ್ಕಳನಿಂತು
ಹೇವವಿಲ್ಲದ ಹೀನ ದೀನತೆಯ ಶಾಪದೊಳು
ಬಂಧಿಸಿಹೆ, ನಿನ್ನ ವಿಪುಳೈಶ್ವರ್ಯವೆರವಾಗ? –

ಶುಷ್ಕಾತ್ಮರಾರ್ತಾಂತರಂಗರಾವೆಮ್ಮ ನೋಡು ;
ಕಾರ್ಪಣ್ಯ ಶಾಪವನು ತೆಗೆದು ತುಷ್ಟಿಯನು ನೀಡು.

—ಪು. ತಿ. ನ.

# ಮರೆತೆ ಯಾತಕಯ್ಯಾ ಮಾತೃಭೂಮಿಯ ?

ಮರತೆ ಯಾತಕಯ್ಯ ನಿನ್ನ ಮಾತೃಭೂಮಿಯ
ನಿರುತ ನಿನ್ನ ಹೊರೆಯ ಹೊತ್ತು ಪೊರೆವ ತಾಯಿಯ ॥ ಪಲ್ಲ ॥

ಒಂಭತ್ತು ತಿಂಗಳು ತನ್ನೊ । ಳಿಂಬುಗೊಟ್ಟವಳು ತಾಯಿ ।
ತೊಂಭತ್ತು ವರುಷಾದರು ಹೊರುವ। ಕುಂಭಿನಿ ತಾಯಲ್ಲೋ ಪ್ರಾಣಿ ॥

ನಡೆ ನುಡಿ ಬರುವನಕಾ ನಿನ್ನ । ಒಡಲು ಸಾಕಿದವಳು ತಾಯಿ ।
ಕಡೆತನಕ ನಿನ್ನೊಡಲಿಗನ್ನವ । ಕೊಡುವವಳು ತಾಯಲ್ಲೋ ಪ್ರಾಣಿ ॥

ಸತ್ತುಬಿದ್ದರೆ ಹೆತ್ತ ತಾಯಿ । ಅತ್ತು ದೂರ ಸರಿಯುವಳು ।
ಮತ್ತೆ ಭೂಮಿತಾಯಿಯು ನಿನ್ನನು । ಎತ್ತಿಕೊಳ್ಳುವಳೋ ಮನುಜಾ ॥

ಗೇಣು ಭೂಮಿಗಾಗಿ ಎನ್ನ । ಪ್ರಾಣಹೋಗಲೆಂದೆನ್ನುವಿ ।
ಕಾಣದೇನೋ ನಾಡೆ ಪರರ- । ಧೀನವಾಗಿಹುದೋ ಮನುಜಾ ॥

ಮರವು ಮರೆತು ಹಿರಿಯ ತಾಯಿಯ । ಅರಿವು ನಿನ್ನೊಳುದಿಸುವಂತೆ ।
ಕರುಣಸಾಗರ ಮುದ್ದುಮೋಹನ । ಗುರು ಗಾಂಧಿಗೆ ಶರಣಾಗೊ ಪ್ರಾಣಿ ॥

—ಮುದ್ದು ಮೋಹನ

# ಆರ್ಯ ಜನನಿ

ರಾಗ: ರೀತಿಗೌಳ, ಆದಿತಾಳ

ಆರ್ಯ ಜನನೀ! ಧರಣೀ! ಸಕಲ ಚೈತನ್ಯ ಸ್ವರೂಪಿಣಿ ॥ ಪಲ್ಲ ॥
ಆರ್ಯರ ಹೃದಯದಲೊಗೆದ ಶ್ರುತಿಯ ಗಾಂಭೀರ್ಯದ
ನಾದತರಂಗಿಣೀ ॥ಅ.ಪ.॥

ಧರೆಯ ದಹಿಪ ಮಾರ್ತಾಂಡನ ಕಿರಣದಲಿರುವ ಚಂಡತೇಜವು ನೀನೇ,
ಹರುಷಾಬ್ಧಿಯೊಳೋಲಾಡಿಪ ಸುಧಾಂಶು ಕಿರಣದ ಶಾಂತಿಕಳೆಯು ನೀನೇ.
ವನಧಿಯುಬ್ಬರಿಸೆ ಶೈಲಗಳಲುಗೆ ಜನಿಪ ಪ್ರಚಂಡ ಮಾರುತ ನೀನೇ,
ಮನದನುರಾಗವ ಜನದನುರಾಗದೊಳನುಗೂಡಿಪ ಮಂದಾನಿಲ ನೀನೇ.
ಬಗೆಗಾಣದ ಸೊಗಮರಿಯದ ಕೊರಳ ಬಿಗಿವ ರೋದನ ಧ್ವನಿ ನೀನೇ.
ಬಗೆಯ ಬಿತ್ತರಿಸಿ ಸ್ವರ್ಗ ಸುಖದ ಮರೆವೊಗಿಪ ವಿಶ್ವವಾದ್ಯವು ನೀನೇ,
ಭಯಾದ್ಭುತ ರಸೋದಯ ಸಮಯದ ನಿರ್ದಯ ಘೋರಾಕಾರವು ನೀನೇ,
ದಯಾ ಶಾಂತಿ ರಸ ರೂಪದ ಸವಿ ಸೌಂದರ್ಯ ರಾಶಿಯು ನೀನೇ.
ಸ್ವಾಂತದ ಸಂತಸ ದುಗುಡದ ಕಲ್ಪಿತ ಚಿಂತೆಯ ಭ್ರಾಂತಿ ವಿಲಾಸವೆ,
ಸ್ವಾಂತದ ನಿರಪೇಕ್ಷೆಯ ಭಾವದ ಸುಖ ಶಾಂತಿಯ ಮೂಲನಿವಾಸವೆ.

—ಭಾರತಿ

# ಭಾರತಸ್ತವನ

ರಾಗ: ಸಾವುಕ್ರಿಯ ಅಷ್ಟತಾಳ

ಶರಣು ದೇವಿಯೆ ನಿನಗೆ ಶರಣು ।
ಶ್ರೀ । ಭರತಮಾತೆಯೆ ನಿನ್ನ ಚರಣಕ್ಕೆ ಶರಣು ॥ ಪಲ್ಲ ॥

ನಿನ್ನಿಂದೆ ಎನ್ನ ಉದ್ಭವವು । ತಾಯೇ । ನಿನ್ನಿಂದೆ ಎನ್ನಯ ಸ್ಥಿತಿಯು ।
ನಿನ್ನಿಂದೆ ಎಲ್ಲವು ಸುಖವು । ತಾಯೇ । ನಿನ್ನ ಬಿಟ್ಟನ್ಯತೋರದೆ ದೈವತವು ॥

ರಾಮ-ಕೃಷ್ಣಾದ್ಯರು ಜನಿಸಿ । ಬಹು । ಪ್ರೇಮದಿ ನಿನ್ನನು ಭಜಿಸಿ ।
ಕಾಮಿತವನೆ ಪೂರ್ಣಗೊಳಿಸಿ । ಸುಖ । ಧಾಮಗೈದರೆ ನಿನ್ನ
ಕೀರ್ತಿಯು ಬೆಳಿಸಿ ॥

ಬಾಲತಿಲಕ ನಿನ್ನಲ್ಲುದಿಸಿ । ನಿನ್ನ । ಭಾಲತಿಲಕ ತಾನೆಂದೆನಿಸಿ ।
ಕೀಳಾಳುತನವನೆಚ್ಚರಿಸಿ । ನಿನ್ನ । ನೋಲೈಸಿದನೆ ಬಹಳಾಯಾಸಗಳಿಸಿ ॥

ಮೋಹನದಾಸನೆಂಬುವನು । ನಿನ್ನ । ಮೋಹದ ಕಂದನಾಗಿಹನು ।
ಸಾಹಸ್ರಕರ ಕಾಂತಿಯುತನು । ನಮ್ಮ । ಮೋಹಗತ್ತಲೆಯನ್ನು
ದೂರ ದೂಡಿಹನು ॥

ನಿನ್ನದಾಸರ ಪಾದಧೂಳೀ । ಸದಾ । ಎನ್ನ ತಲೆಯ ಮೇಲಿರಲಿ ।
ನಿನ್ನ ಸ್ಮರಣೆ ತಪ್ಪದಿರಲಿ । ತಾಯೇ । ನಿನ್ನ ಸೇವೆಗೆ ಮನವಿದು ನೆಲೆಗೊಳಲಿ ॥

ನೂರೆಂಟು ನುಡಿದೇನು ಫಲವು । ನಿನ್ನ ಪಾರತಂತ್ರ್ಯದ ಯಾತನೆಯು ।
ದೂರವಾಗುವುದೇ ಕಾರಣವು । ಮತ್ತೆ । ರೀರವೀ ಕಾಯಕ್ಕೆ ಬೀಳಲಿ
ಬಲಿಯು ॥

ಶುದ್ಧಸ್ವಾತಂತ್ರ್ಯದೇವತೆಯು । ದಿವ್ಯ । ಗದ್ದುಗೆಯೊಡೆತನಸಿರಿಯು ।
ಪೊದ್ದಿದ ನಿನ್ನ ಮೂರುತಿಯು । ನೋಡೆ । ಮುದ್ದುಮೋಹನನೀಯುಲಿಮಗೆ
ಸನ್ಮತಿಯು ॥

—ಮುದ್ದು ಮೋಹನ

# ಇಂದಿನ ದೇವರು

ನೂರು ದೇವರನೆಲ್ಲ ನೂಕಾಚೆ ದೂರ
ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ !

ಶತಮಾನಗಳು ಬರಿಯ ಜಡಶಿಲೆಯ ಪೂಜಿಸಾಯ್ತು ;
ಪಾವ್ಗಳಿಗೆ ಪಾಲೆರೆದು ಪೋಷಿಸಾಯ್ತು !
ಬಿಸಿಲು ಮಳೆ ಗಾಳಿ ಬೆಂಕಿಯನೆಲ್ಲ ಬೇಡಿಯಾಯ್ತು ;
ದಾಸರನು ಪೂಜಿಸಿಯೆ ದಾಸ್ಯವಾಯ್ತು !

ಗುಡಿಯೊಳಗೆ ಕಣ್ಮುಚ್ಚಿ ಬೆಚ್ಚಗಿರುವರನೆಲ್ಲ
ಭಕ್ತ ರಕ್ತವ ಹೀರಿ ಕೊಬ್ಬಿಹರನೆಲ್ಲ,
ಗಂಟೆ ಜಾಗಟೆಗಳಿಂ ಬಡಿದು, ಕುತ್ತಿಗೆ ಹಿಡಿದು
ಕಡಲಡಿಗೆ ತಳ್ಳಿರೈ ಶಂಖದಿಂ ನುಡಿದು !

# ಇಂದಿನ ದೇವರು

ಒಡ್ಡೆ ಮಾಡುತ್ತಿಹರು ಹಲವು ದೇವತೆಗಳೆಲ್ಲ,
ಬಿದ್ದವರು ಕಲ್ಲಾಗಿ ಕೆಲವರಿಹರು;
ಕ್ಲೀಬತನದಲಿ ಮರೆತು ತಮ್ಮ ಪೌರುಷವನೆಲ್ಲ
ಸತ್ತೆಕೋದಂತಿಹರು ಮುತ್ತುಳಿದಮರರು.

ಅವರ ಗುಡಿ ಹಾಳಾಯ್ತು; ಅವರ ನುಡಿ ಮಡಿದುಹೋಯ್ತು;
ಅವರ ನೆಮ್ಮಿದ ನಮಗೆ ಬೀಳುಗತಿಯಾಯ್ತು!
ಮುಂದಿವಳನಾರಾಧಿಸುವ, ಶಕ್ತಿಯಾರ್ಜಿಸುವ;
ಒಂದು ಶತಮಾನವನು ಒಂದೆ ದಿನ ಜೈಸುವ!

ಸತ್ತ ಕಲ್ಗಳ ಮುಂದೆ ಅತ್ತು ಕರೆದುದು ಸಾಕು,
ಜೀವದಾತೆಯನಿಂದು ಕೂಗಬೇಕು!
ಶಿಲೆಯ ಮೂರ್ತಿಗೆ ನೆಯ್ದ ಕಲೆಯ ಹೊದಿಕೆಯನೊಯ್ದು
ಚಳಿಯು ಮಳೆಯಲಿ ನವೆವ ತಾಯ್ಗೆ ಹಾಕು!

ಭಾರತಿಯೆ ನಮಗಿಂದು ಜೀವನದ ದೇವತೆಯು,
ವಿಶ್ವರೂಪಿಣಿಯವಳು, ವಿಶ್ವಮುಖಿಯೈ!
ನಮ್ಮೆಲ್ಲರಂಗಗಳೆ ನಮ್ಮಂಬೆಯಂಗವೈ,
ನಮ್ಮ ಸ್ವಾತಂತ್ರ್ಯದೊಳೆ ನಮ್ಮಮ್ಮ ಸುಖಿಯೈ!

ಇಂದೊ ನಾಳೆಯೊ ದಾಸನೀಶನಾಗಲೆ ಬೇಕು,
ಎಂದಿಂದೆ ಎದ್ದೇಳಿ; ನಾಳೆಯೆನೆ ಹೋಕು!
ನಾವೆ ದೇವತೆಗಳೈ! ಭಾರತವೆ ಸ್ವರ್ಗವೈ!
ಭಾರತಾಂಬೆಯೆ ನಮಗೆ ದೇವಿಯೈ, ಜನನಿ!

—ಕೆ. ವಿ. ಪುಟ್ಟಪ್ಪ

# ಪಾಂಚಜನ್ಯ

ನಡೆ ಮುಂದೆ, ನಡೆ ಮುಂದೆ,
ನುಗ್ಗಿ ನಡೆ, ಮುಂದೆ!
ಜಗ್ಗದೆಯೆ, ಕುಗ್ಗದೆಯೆ,
ಹಿಗ್ಗಿ ನಡೆ ಮುಂದೆ!

ಬೆಚ್ಚಬಿಡು, ನೆಚ್ಚನೆಡು
ಕೆಚ್ಚೆದೆಯ ಗುಡಿಯಲ್ಲಿ;
ಸೆರೆಯ ಹರಿ, ಅರಿಯುಸಿರಿ,
ಹುಟ್ಟಳಿಸು ಹುಡಿಯಲ್ಲಿ!
ನಾನಳಿವೆ, ನೀನಳಿವೆ,
ನಮ್ಮೆಲುಬುಗಳ ಮೇಲೆ
ಮೂಡುವುದು, ಮೂಡುವುದು
ನವಭಾರತದ ಲೀಲೆ!
ನೊಂದ ದನಿ, ಕಣ್ಣಪನಿ,
ಬರಿದೆ ಎಂದೊರೆಯದಿರು!
ತೆತ್ತ ಹಣ, ಸತ್ತ ಹೆಣ,
ಹೋಯ್ತೆಂದು ಮೊರೆಯದಿರು!
ಪೊಡವಿಯೊಳಗಡಗಿರುವ
ತಳಹದಿಯ ತೆಗಳುವರೆ?
ಮೆರೆಯುತಿರುವರಮನೆಯ
ಸಿರಿಯೊಂದ ಹೊಗಳುವರೆ?

ಎಲ್ಲ ಇದೆ, ಎಲ್ಲ ಇದೆ,
ನಿತ್ಯತೆಯ ಗಬ್ಬದಲಿ;
ಮುಂದೆಯದು ತೋರುವುದು
ಬಿಡುಗಡೆಯ ಹಬ್ಬದಲಿ!
ನೆಚ್ಚುಗೆಡಬೇಡ ನಡೆ,
  ಕೆಚ್ಚೆದೆಯ ಕಲಿಯೆ!
ಬೆಚ್ಚಿದರೆ, ಬೆದರಿದರೆ,
  ಕಾಳಿಗದು ಬಲಿಯೆ?

ಭರತಖಂಡದ ಹಿತವೆ
  ನನ್ನ ಹಿತ ಎಂದು,
ಭರತಮಾತೆಯ ಮತವೆ
  ನನ್ನ ಮತ ಎಂದು,
ಭಾರತಾಂಬೆಯ ಸುತರೆ
  ಸೋದರರು ಎಂದು,
ಭಾರತಾಂಬೆಯ ಮುಕ್ತಿ
  ಮುಕ್ತಿ ನನಗೆಂದು,
ನುಗ್ಗು ಮುಂದಕೆ, ಧೀರ,
  ಕಾಳೆಗದ ಕೊಲೆಗೆ!
ನುಗ್ಗು ಮರಣಕೆ, ವೀರ,
  ಸಗ್ಗದಾ ನೆಲೆಗೆ!

ನೋಡದೋ, ನೋಡಲ್ಲಿ,
ದರ್ಪರಥದಡಿಯಲ್ಲಿ
ಹೊರಳುತಿರುವಳು ತಾಯಿ
ನೆತ್ತರಿನ ಪುಡಿಯಲ್ಲಿ!

ಬಾಳನೊರೆಯಿಂದ ಹಿರಿ!
ನುಗ್ಗು, ನಡೆ, ಕಟ್ಟ ಹರಿ!
ತಡೆಯು ಬಂದವರ ಇರಿ!
ಒಲಿಯುವಳು ಜಯದ ಸಿರಿ!
ಜನ್ಮವೊಂದಳಿದರೇಂ?
   ನೂರಿಹವು ಬಳಿಗೆ!
ಕಾಳಗದೊಳಳಿಯಲೇಂ?
   ಸಾವೆ ಸಿರಿ ಕಲಿಗೆ!

ನಿಂತೇನು ನೋಡುತಿಹೆ?
   ಹದುಗುವರೆ ಇಲ್ಲಿ?
ಮಸಣವಾಗಲಿ ಎದೆಯು
   ರಣರಂಗದಲ್ಲಿ!
ನೆತ್ತರನು ನೋಡುವೆಯ?
ಸತ್ತವರ ನೋಡುವೆಯ?
ಕಂಕಾಲಗಳ ಗೂಡೆ?
ಮರುಳುಗಳ ನೆಲೆಬೀಡೆ?
ಕಾಳಿಯುಳುಕುವಳೇನು
   ರಕ್ಕಸರ ಬಲಿಗೆ?
ಸಮರ ರಂಗದ ನಡುವೆ
   ಬೆದರಿಕೆಯೆ ಕಲಿಗೆ?
ಹಾ, ನೋವು! ಹಾ, ನೋವು
ಎಂದೆಲ್ಲ ಕೂಗುವರೆ?
ಹಾ ನೀರು! ಹಾ ನೀರು!
ಎಂದಸುವ ನೀಗುವರೆ?

ಕೂಗಿಗೆದೆಗರಗದಿರು!
ಬೇನೆಯಿರೆ ಮರುಗದಿರು!
ಕಂಬನಿಯ ಕರೆಯದಿರು,
  ಗುರಿಯ ಮರೆಯದಿರು;
ಕಲಿಯೆ, ಹಿಂಜರಿಯದಿರು,
  ತಾಯ ತೊರೆಯದಿರು!
ಎಲುಬುಗಳ ತೊಲೆಗಳಲಿ,
ಮಾಂಸದಾ ಮಣ್ಣಿನಲಿ,
ನೆತ್ತರಿನ ನೀರಿನಲಿ,
ಬೇನೆ ಬಿಸುಸುಯ್ಲಿನಲಿ,
ಬಿಡುಗಡೆಯ ಸಿರಿಗುಡಿಯ
  ಮಸಣದಲಿ ಕಟ್ಟು!
ಪಾವನದ ತಾಯಡಿಯ
  ಬಲ್ಮೆಯಲಿ ಮುಟ್ಟು!
ಆತ್ಮವಚ್ಯುತವೆಂದು,
ಜನ್ಮಗಳು ಬಹವೆಂದು,
ಮೃತ್ಯು ನಶ್ವರವೆಂದು,
ಭಾರತಿಗೆ ಜಯ ಎಂದು,
ನಡೆ ಮುಂದೆ, ನಡೆ ಮುಂದೆ,
  ನುಗ್ಗಿ ನಡೆ, ಮುಂದೆ!
ಜಗ್ಗದೆಯೆ, ಕುಗ್ಗದೆಯೆ,
  ಹಿಗ್ಗಿ ನಡೆ, ಮುಂದೆ!

—ಕೆ. ವಿ. ಪುಟ್ಟಪ್ಪ

# ನಾಡಿನ್ ಒಡವ ಸರ್ಕಸ್ ಸಿಮ್ಮ

ನಾಡಿನ್ ಒಡವ! ಸರ್ಕಸ್ನ ಸಿಮ್ಮ!
ಕಪ್ಚಿ ಯಿಡಿದೋನ್ ಬೆಪ್ಪ್ ಸನ್ನ್ ತಮ್ಮ!
ಔನ್ಗೆ ಯೆದರಿ ಬಾಲಾ ಮುದರಿ
ಮೂಲ್ಯಾಗ್ ಮುದಕೊರ್ಬೇಕ?
ಕಪ್ಚಿ ಯಿಡಿದೋನ್ ಕೈಲ್ ಏನ್ ಆಗ್ತೈತ್?
ಔನ್ಗೆ ಯೆದಕೊರ್ಬೇಕ!

ನಿನ್ಗೇ ಗೊತ್ತಿಲ್ಲಾ ನಿನ್ ಸಕ್ತಿ!
ಯೋಳಾಕ್ ಬಂದ್ರೆ ಸಿರ್ರಂತ್ ರೇಗ್ತಿ!
ಕೂಕ್ಕೊಂಡ್ ಕಜ್ಜೋಕ್ ಮೇಲ್ ಆರ್ಬರ್ತಿ!
ಏನ್ ಏಳಾನೆ ಸಿಮ್ಮ!
ಮಕ್ಕಳ್ನ ಇಡಿದಂಗ್ ಇಡಿದೈತ್ ನಿನ್ನ
ಕಪ್ಚಿ ಯಿಂಡಿಯೋ ಗುಮ್ಮ!

ದುಡಿಯೋನ್ ನೀನು! ಪಡೆಯೋನ್ ಔನು!
ಬೋನ್ ನಿನಗಾದ್ರೆ ಔನ್ಗೆ ಗೌನು!
ದುಡ್ಡೀ ದುಡ್ಡೀ ದುಡ್ಡಿನ್ ಬೆಟ್ಟ
ನೀ ಮಾಡಾಕು! ಪೇಸರ್!
ನಿನ್ ದುಡ್ನಲ್ಲಿ ತಕ್ಕೋಂತ್ ಒಂದ್ ಕಾಸ್
ನಿಂಗ್ ಔನ್ ಎಸದ್ರೆ ಸೈಸರ್!

ಮೈ ನಿಂಗ್ ಐತೆ! ಮನಸ್ ನಿಂಗ್ ಇಲ್ಲ?
ಮನಸೂ ಐತೊ! ನೀನ್ ನೋಡಾಲ್ಲ!
ಸಕ್ತಿ ಅದೆ! ಉಕ್ತಾ ಅದೆ!
   ನಿಂಗೆ ಎಲ್ಲಾ ಅದೆ!
ಸರಪ್ಣಿ ಬಿಕ್ಕೊಂಡ್ ಸುಂಕ್ ಯಾಕ್ ಇರಬೇಕ್
   ಎತ್ತ್ ಅದನ್ ಆಚೇಗ್ ಒದೆ!

ಬೂಮೀಲ್ ಮನ್ಸ ನೀರಲ್ಲ ಮೀನು
ಮೇಲ್ ನಕ್ಸತ್ರ ಎಲ್ಕು ನೀನು –
ಪರಪಂಚ್ಕೆಲ್ಲ ಒಡೆಯ ನೀನು!
   ಏನ್ ಏಳಾನೆ ನಿನ್ಗೆ!
ಗುಡಿಸೋ ಪೊರಕೆ ಆಗೋದ್ನಲ್ಲಿ
   ಎಜಮಾನ್ನೇನೆ ಮನ್ಗೆ!

ಕಮ್ಚಿಗಾ ನೀನ್ ಎದರ್ಕೋಬೇಕು?
'ಹ್ಚೊ' ಅಂತ್ ಒದರಿ ಗರ್ಜಿಸ್ ಸಾಕು!
ಮೈನಾಗ್ ಕೂದ್ಲು ಶಠಂ ಅಂತ್ ಇರ್ಲಿ!
   ಬಾಲದ್ ಬಾವ್ಟ ಏರ್ಲಿ!
ಕಮ್ಚಿ ಇಡಕೊಂಡ್ ಯಾವ್ರೋನ್ ಬಂದಾನ್
   ನೋಡ್ಚಾ ಬರೋನ್ ಬರ್ಲಿ!

—ರತ್ನ

# ಗ್ರಾಮ ಸೇವಕರ ಹಾಡು

ಭಾರತವರ್ಷವಿದೊಂದೇ ಗ್ರಾಮ,
ಭಾರತವಾಸಿಗಳೊಂದೆ ಕುಟುಂಬ,
ನೂರುಮತಗಳಲಿ ಒಂದೇ ಧರ್ಮ,
ನೂರುಮಾತುಗಳೊಳೊಂದೇ ಮರ್ಮ

ಒಂದೇ ಕುಲದಲಿ, ಒಂದೇ ಛಲದಲಿ,
ಒಂದೇ ಬಲದಲಿ ಬಳೆದವರೆಂದೂ
ಒಂದೇ ಜನಪದ ಒಂದೇ ಸಂಪದ
ಒಂದೇ ಹಾಡಿಗೆ ಕಾಲಿಡಲಿಂದೂ.

ಅನ್ನಪೂರ್ಣೆ ಹಸಿದಿರುವವಳಂತೆ,
ಸ್ವರ್ಣಗರ್ಭೆ ದೀನಾನನೆಯಂತೆ,
ಪುಣ್ಯಭೂಮಿ ಸಮರಾಂಗಣವಂತೆ
ತನ್ನವರಾರೂ ಕಿವಿಗುಡರಂತೆ!

ಒಳಗಗದ್ದಲದಿ ಕೇಳುವುದುಂಟೇ?
ಒಳಜಗಳಗಳಲಿ ಬಾಳುವುದುಂಟೆ?
ಹಳಬರ ಮರೆತಿರಿ, ಹೊಸತೊಂದರಿಯಿರಿ,
ತಲೆಗೆಡುವಿರಿ ಕಾಲಿಡಲರಿಯದಿರೇ.

ಮೂವತ್ತೈದಿದೆ ಬಟ್ಟಲನಿಟ್ಟು,
ಬೇವುತ್ತಿದೆ ಹಸಿವಿಂದಿನ್ನೆಷ್ಟು!
ಸಾವಿಗೆ ತುತ್ತಾಗುವ ಜಡರೆಷ್ಟು!
ಜೀವನಕೊಂದಿದೆ ಮರೆತಿಹ ಗುಟ್ಟು –

ಬೆವರೇ ಮಣ್ಣಿಗೆ ಪೌಷ್ಟಿಕ ತತ್ತ್ವ,
ಬೆವರೇ ನವಸಂಜೀವನ ಸತ್ತ್ವ,
ಬೆವರಲಿ ಮಿಂದರೆ, ಹಸಿವಿನ ತೊಂದರೆ
ಜವನಿಗೆಯಲ್ಲದೆ, – ಜನಕೆಲ್ಲುಂಟು ?

‘ ಆಡುವರಲ್ಲದೆ, ಮಾಡುವರಿಲ್ಲ ;
ನೋಡುವರಲ್ಲದೆ, ಕೂಡುವರಿಲ್ಲ ;
ಬೇಡುವರಲ್ಲದೆ, ನೀಡುವರಿಲ್ಲ ;
ನಾಡೆಲ್ಲವು ಕಾಡಾಗುವುದಲ್ಲ ! ’

ಕಣ್ಣೀರಿಡುವಾ ತಾಯ್ನುಡಿ ಕೇಳು !
ಕಣ್ಣೊರಳಿಸಿ ಧೃತಿಯಿಂದೆದ್ದೇಳು !
ಮಣ್ಣನು ಬೆವರಿಂ ಪುಟಕಿಡಬಲ್ಲರೆ, –
ರನ್ನವಾಗುವುದು ಬೆಂದೊಣ ಮಳಲು.

ತನ್ನನೆ ಉದ್ಧರಿಸುವ ಬಗೆ ಬೇಕು ;
ತನ್ನವರಲಿ ಬೆರಸುವ ಸಗೆ ಬೇಕು ;
ತನ್ನದೆಲ್ಲವೆಲ್ಲರಿಗೆನ ಬೇಕು ;
ತನ್ನೆದೆಗೆಲ್ಲರ ಭರವಸೆ ಬೇಕು ; –

ಬೇಡುವ ಕೈ ನೀಡಲು ಬಲಿಸುವುದು,
ಆಡದೆ, ಹಿರಿದನೆ ಮಾಡಕಲಿವುದು ;
ನೋಡುತಿರದೆ ಒಡನಾಡುವುದಾಗಲಿ
ಕಾಡೆಲ್ಲವು ಚೆನ್ನಾಡಾಗುವುದು.

## ಪ್ರಮಾಣ

ಮುಂದಿನ ನಾಯಕರಿಂದಿನ ಬಾಲಕ
ವೃಂದವೆಂದು ನಾವ್ ನಂಬಿಹೆವು;
ಮುಂದಿನ ಭಾರತಸಂಪದಕಾರಕ -
ರೆಂದೇ ನಂಬುಗೆ ತುಂಬಿಹೆವು

ಭಾರತವರ್ಷ ಗ್ರಾಮೀಣರ ಪರಿ –
ವಾರದಿ ಸೇರುತ ಸಾಧಿಸುವಾ !
ತಾರಕವೊಂದೇ ಕಾರ್ಯಾಸಕ್ತಿಯು –
ಪಾರಮಹಿಮೆಯನೆ ಬೋಧಿಸುವಾ

'ಅರೆಹೊಟ್ಟೆಯು ಕಿರುಬಟ್ಟೆಯು ದಿನಗಳ
ಮರೆಯಿರಿ; ಸಹಕಾರದಿ ಬಲಿತು
ತಿರುಪೆಯು ಕೈಯಲಿ ನೇಗಿಲಿರಲಿ, ಮೈ-
ಮುರಿದು ದುಡುಕಿ ದುಡಿಯುವ ಎಲ್ಲರಿಗೂ'

ಪಶುಗಳೆನದೆ ಬರೆದೋದುವ ; ಸುತ್ತಲ
ವಸುಧೆಯು ವಾರ್ತಾಸಾಹಿತ್ಯದಲಿ
ವ್ಯಸನಿಗಳಾಗಿ, ನಿರ್ಮಲ ಸುಖಜೀವನ
ಬೆಸನದ ತೃಪ್ತಿಯು ಬೇಡುವ ಹಿತದಲಿ

ಗ್ರಾಮಗ್ರಾಮದಿ ಭಾರತವರ್ಷವ
ಪ್ರೇಮದಿ ನಿರ್ಮಿಸಿ ಅರ್ಚಿಸುವ !
ಈ ಮಹಾಜನಾಭಯಪ್ರಸಾದದಿ
ಕ್ಷೇಮವೊದಗುವೊಲು ಯಾಚಿಸುವ

—ದಿವಂಗತ ಎಂ. ಎನ್. ಕಾಮತ

# ಮೂವತ್ತುಮೂರು ಕೋಟಿ

[ಕಡೆಯಿಲ್ಲದ ಕಡಲ ನಡುವೆ ಸ್ಥಿರಾಸನದಲ್ಲಿ ಭೂಮಿತಾಯಿಯು ಧ್ಯಾನಮುದ್ರೆಯಲ್ಲಿ ಕುಳಿತಿದ್ದಾಳೆ. ಅವಳ ಎಡತೊಡೆಯ ಮೇಲೆ ಭಾರತಿಯು ತನ್ನ ಮೊಗವನ್ನು ಬಲಗೈಯಿಂದ ಮುಚ್ಚಿ ಒರಗಿಸಿ ಎಡಗೈಯನ್ನೆತ್ತಿ ಹಾಡಿ ಹಾಡಿ ತನ್ನ ಪಾಡನ್ನು ತೋಡಿಕೊಳ್ಳುತ್ತಲಿದ್ದಾಳೆ. ಅವಳ ಸುತ್ತಲೂ ವಿವಿಧಾಕಾರದ ಕೋಟ್ಯಾವಧಿ ಪ್ರಾಣಿಗಳು ಅಸ್ತವ್ಯಸ್ತವಾಗಿ ಬಿದ್ದುಕೊಂಡಿವೆ.]

ಮಕ್ಕಳಿವರೇನಮ್ಮ ? ಮಕ್ಕಳಿವರೇನಮ್ಮ
ಮೂವತ್ತುಮೂರು ಕೋಟಿ ? ।ಪಲ್ಲ।

ಮೂವತ್ತುಮೂರು ಕೋಟೀ, ಮೂವತ್ತುಮೂರು ಕೋಟೀ !
ಮಕ್ಕಳಿವರೇನಮ್ಮ ? ಮಕ್ಕಳಿವರೇನಮ್ಮ ?
ಮೂವತ್ತುಮೂರು ಕೋಟೀ ।
ನಾ ಹಡೆದ
ಮೂವತ್ತುಮೂರು ಕೋಟಿ ।ಅ.ಪ.।

## ಮೂವತ್ತು ಮೂರು ಕೋಟಿ

ಮೂವತ್ತುಮೂರು ಕೋಟೀ, ಮೂವತ್ತುಮೂರು ಕೋಟೀ!
ಬಯಕೆಗಳು ಬಸಿರುಗಳು ಹಡೆದದ್ದು ಹಿಂಗಿದ್ದು
ಮೂವತ್ತುಮೂರು ಕೋಟೀ!
ಸೂಲಗಳು
ಮೂವತ್ತುಮೂರು ಕೋಟಿ!!

ಹಲಕೆಲವು ಹುಳುಗಳೆನ್ನೀ! ಹಲಕೆಲವು ಕುರುಡುಕುನ್ನೀ!
ಕೆಲಕೆಲವು ಹುಚ್ಚುಕುರಿ! ಕೆಲವು ಹೊಸಹೊಚ್ಚಮರಿ!
ಗಂಡುತನಕೇಸೊ ಸೊನ್ನೀ!
ಲೆಕ್ಕಕ್ಕೆ
ಮೂವತ್ತುಮೂರು ಕೋಟಿ!!

ಅತ್ತೊಂದು ಹತ್ತು ಕೋಟೀ! ಇತ್ತೊಂದು ಹತ್ತು ಕೋಟೀ!
ಸೋದರರು ಇದ್ದರೂ ಆದರದ ನುಡಿಯಿಲ್ಲ;
ಅತ್ತಿತ್ತ ಹತ್ತು ಕೋಟೀ!
ಹೆಸರಿಗೇ
ಮೂವತ್ತುಮೂರು ಕೋಟಿ!!

ಬೀತನರಪೇತುಗಳಿರಾ! ಬಾತಂಥ ಪ್ರೇತಗಳಿರಾ!
ಮಣ್ಣನ್ನು ಮುಕ್ಕುವಿರಿ, ಮಸಣದಲಿ ಬಿಕ್ಕುವಿರಿ!
ಹಾರಿರೋ ಜೊಳ್ಳುಗಳಿರಾ!
ಉಸಿರಿಡುವೆ
ಮೂವತ್ತುಮೂರು ಕೋಟಿ!!

ಸುಣ್ಣವನು ಸುರಿದ ಮೇಲೇ ಕಣ್ಣೀರನೆರೆಯೆ ಹಾಲೇ ?
ಬಣ್ಣ ಬಣ್ಣದ ಜೀವ ಕತಕತನೆ ಕುದಿಯುವವು
ಮನೆಯಾಯ್ತು ಮಲ್ಲಸಾಲೇ ;
ಇದು ಬದುಕೆ ?
ಮೂವತ್ತುಮೂರು ಕೋಟಿ !!

ಹಂಗಿನರಮನೆಯು ನರಕಾ – ತಂಗುವಿರಿ - ಇಹುದೆ ಮರುಕಾ ?
ಹಿಡಿಬೆರಳ ಹಿಡಿಯಲ್ಲಿ ಅಡಿಯೆರಡರಡಿಯಲ್ಲಿ
ಹೊರಳಿ ಒರಲುವಿರಿ ಅಕಟಾ !
ಅಕಟಕಟ !
ಮೂವತ್ತುಮೂರು ಕೋಟಿ !!

ಹಾಳರ್ಧ ಹೊಲೆಯರೆಂದೂ ಬೀಳರ್ಧ ಹೆಣ್ಣು ಎಂದೂ
ಹೋಳುಹೋಳಾಗಿಹುದು ; ಆಳುಬಾಳಾಗಿಹುದು
ಏಳಿರೋ ಆಳಿರೆಂಬೇ –
ಬಾಳಿರೋ
ಮೂವತ್ತುಮೂರು ಕೋಟಿ !!

ಹಡೆದೊಡಲು ಬಂಜೆಯಾಯ್ತೋ ? ಬಾಳ್ಮೊದಲೆ ಸಂಜೆಯಾಯ್ತೋ ?
ಭಾರತಿಗೆ ತಲೆಭಾರ ಇರುವಳೆಂಬ ವಿಚಾರ –
ಬಾಳ್ವೆಣ್ಣು ಗಂಟು ಆಯ್ತೋ ?
ಒರಿ ಶೂನ್ಯ
ಮೂತ್ತುಮೂರು ಕೋಟಿ !!

## ಮೂವತ್ತು ಮೂರು ಕೋಟಿ

ನನ್ನೆದೆಯ ಹಾಲನೆರೆಸೀ ಸನ್ನೊಳಿಹ ಬೆಳಕ ಬೆರಸೀ,
ವಜ್ರದೇಹಿಗಳೆಂದೆ ಗೊಸೆಮಿಂಚೊ ಎನೆ ಕಂಡೆ –
ವಿಜಯವಿರಲೆಂದು ಹರಸೀ
ಕಳುಹಿದೆನು
ಮೂವತ್ತುಮೂರು ಕೋಟಿ !!

ಬಸುರಿನಲಿ ಪಡೆದುದೇನು ? ಹೊರಗಿಲ್ಲಿ ಹಡೆದುದೇನು ?
ಅರರೆ ! ಒಡಕೊಡಲುಗಳು ಸೆರೆಮನೆಗಳಾದುವೋ !
ನಸ್ನಳಲು ಕೇಳದೇನೋ
ಎಲೆಲೇ
ಮೂವತ್ತುಮೂರು ಕೋಟಿ !!

ಡಿಂಭಗಳನೊಡೆದು ಬನ್ನೀ ! ಕಂಭಗಳನೊಡೆದು ಬನ್ನೀ !
ಮೈಯಲ್ಲಿ ಮುಡುಗದಿರಿ ! ಮನದಲ್ಲಿ ಅಡಗದಿರಿ !
ತಾಯೆ ಇದೊ ಬಂದೆವೆನ್ನೀ !
ನಾ ಪಡೆದ
ಮೂವತ್ತುಮೂರು ಕೋಟಿ !!

— ಅಂಬಿಕಾತನಯದತ್ತ

# ಸತ್ಯಾಗ್ರಹಿ

ಸ್ವಾತಂತ್ರ್ಯ ಸಂಗ್ರಾಮದಲಿ ತನ್ನ ಜೀವನನು
ಲೆಕ್ಕಿಸದೆ ಹೋರುವನೆ ವೀರ ಸತ್ಯಾಗ್ರಹಿ :
ನೊಂದರೂ, ಬೆಂದರೂ, ಸತ್ಯವನು ಕೈಬಿಡದೆ
ಜವನ ದಾಡೆಯ ನುಗ್ಗುವವನು ಸತ್ಯಾಗ್ರಹಿ !
ಆತ್ಮಶಕ್ತಿಯ ಬಲದಿ ಮಿಂಚುಗಳ ಸಂತೈಸಿ
ಸಿಡಿಲುಗಳ ಬೋಳೈಸುವವನು ಸತ್ಯಾಗ್ರಹಿ ;
ಹೊಡೆಯದೆಯೆ ತಡೆಯುವನು ವೀರ ಸತ್ಯಾಗ್ರಹಿ !
ಗೆಲ್ಲದೆಯೆ ಗೆಲ್ಲುವನು ವೀರ ಸತ್ಯಾಗ್ರಹಿ !
ಸಿಡಿಗುಂಡಿನೆದುರಿನಲಿ, ಕೂರಸಿಗಳೆದುರಿನಲಿ,
ಕಬ್ಬಿಣದ ಸಂಕೋಲೆಗಳ ಕರಿಯ ತೆಕ್ಕೆಯಲಿ,
ಜೈಲಿನಲಿ, ಅಧಿಕಾರಿಗಳ ಕ್ರೂರದರ್ಪದಲಿ,
ಹರಿವೆದೆಯ ನೆತ್ತರಿನ ಹೊಳೆಯಲ್ಲಿ, ಮುಂದಿಟ್ಟ
ಕಾಲ ಹಿಂದೆಗೆಯದಳಿವವನು ಸತ್ಯಾಗ್ರಹಿ !
ದೇಶಮಾತೆಯ ಸುಖಕೆ ತನ್ನ ಸುಖವನು ಬೇಳ್ವ,
ದೇಶದ ಬದುಕಿಗಾಗಿ ತನ್ನ ಬದುಕನು ಸೀಳ್ವ,
ಹಿಂಸೆಯನಹಿಂಸೆಯಿಂ ಹಿಂಸಿಸಿಯೆ ಕೊಲ್ವ,
ಸಮರಲೋಲನೆ ನಮ್ಮ ವೀರ ಸತ್ಯಾಗ್ರಹಿ !

## ಸತ್ಯಾಗ್ರಹಿ

ಪ್ರೇಮಾಗ್ನಿಯಿಂ ದ್ವೇಷದಗ್ನಿಯನು ಸುಟ್ಟು,
ದೇಹಶಕ್ತಿಯನಾತ್ಮಶಕ್ತಿಯಿಂ ಗೆದ್ದು,
ಬಗೆಯಲ್ಲಿ, ಬಾಯಲ್ಲಿ ಕೈಯಲ್ಲಿ ಹಿಂಸೆಯನು
ಬಿಟ್ಟು ಹೋರುವ ಭಟನು ವೀರ ಸತ್ಯಾಗ್ರಹಿ !
ಹೇಳದೆಯೆ ಕೇಳದೆಯೆ ದಳಪತಿಯು ನುಡಿದಂತೆ
ಮಾಡುವವನಾವನೋ ಅವನೆ ಸತ್ಯಾಗ್ರಹಿ ;
ಕೋಪಿಸದೆ ಶತ್ರುವಿನ ರಭಸವಹ ಕೋಪವನು
ಸಹನೆಯಿಂ ಗೆಲ್ಲುವ ಪರಾಕ್ರಮಿಯು ; ಬಲವಿರಲು
ಬಲುಮೆಯನು ತೋರದನು ದಿವ್ಯ ಸತ್ಯಾಗ್ರಹಿ!
ತನ್ನ ತಾಯಿಯ ಉಪ್ಪು ತನ್ನ ವಶದಲ್ಲಿರಲು
ಇತರರನು ನೋಯಿಸದೆ ತನ್ನ ಜೀವವ ತೆತ್ತು
ಕಾಯುವವನಾವನೋ ಅವನೆ ಸತ್ಯಾಗ್ರಹಿ !
ಎಂದಿಗೂ ಆಣೆಯಿಡದವನು ಸತ್ಯಾಗ್ರಹಿ !
ಎಂದಿಗೂ ಶಾಪಕೊಡದವನು ಸತ್ಯಾಗ್ರಹಿ !
ರಾಕ್ಷಸೀ ಬಲದಿಂದ ನಮ್ಮನಾಳುವ ಜನರ
ಹಳವಿಗೆಗೆ ಬಾಗದವನವನೆ ಸತ್ಯಾಗ್ರಹಿ !
ತನ್ನ ಗೌರವ ಕೆಡದ ರೀತಿಯಲಿ ನಡೆಯುವನು,
ತನ್ನ ಚಾಗಕೆ ತಾನೆ ಬಲು ಹೆಮ್ಮೆ ಪಡದವನು,
ಮೆರೆಯದೆಯೆ ಹಡೆದ ಮಾತೆಯ ಸೇವೆಯನು ಮಾಡಿ
ಮೌನದಿಂ ಮಡಿವವನು ಧನ್ಯ ಸತ್ಯಾಗ್ರಹಿ !
ಕಲಿಯುಗದ ಪ್ರಚ್ಛನ್ನ ಕಲ್ಕಿ ಸತ್ಯಾಗ್ರಹಿ !

— ಕೆ. ವಿ. ಪುಟ್ಟಪ್ಪ

# ತುತ್ತಿನ ಚೀಲ

ಅನ್ನಬ್ರಹ್ಮದ
ದೇಗುಲದಲ್ಲಿ
ಬೆಳಗೂ ಬೈಗೂ
ಛಿಳಿಛಿಟಿ ಬೆಂಕಿ
ಡೊಂಬರ ಪೂಜೆಯು
ಕಾಗೆಯ ಮಂತ್ರ
ಗಾಳಿಯ ಎಡೆಯು
ಬೊಬ್ಬೆಯ ಗಂಟೆ–
ಅನ್ನಬ್ರಹ್ಮದ
ದೇಗುಲದಲ್ಲಿ!

ನಾದಬ್ರಹ್ಮದ
ಕಗ್ಗವಿಯಲ್ಲಿ
ಮೌನದ ವೀಣೆಗೆ
ಕರುಳಿನ ತಂತಿ
ಮಿಡಿದೂ ಮಿಡಿದೂ
ಮುರಿದವು ಬೆರಳು
ಮಿಡುಕೀ ಮಿಡುಕೀ
ನೊಂದಿತು ಎದೆಯು—
ನಾದಬ್ರಹ್ಮದ
ಕಗ್ಗವಿಯಲ್ಲಿ!

## ತುತ್ತಿನ ಚೀಲ

ಶಬ್ದಬ್ರಹ್ಮದ
ಗುಮ್ಮಟದಲ್ಲಿ
ಹಗಲೂ ಇರುಳೂ
ವೇದದ ವಾದ
ಪಾಪಪುಣ್ಯಗಳ
ಜಾಳಿಗೆಯಲ್ಲಿ
ನೇತಿದೆ ಜೋತಿದೆ
ಜೀವದ ಜೇಡ
ಶಬ್ದಬ್ರಹ್ಮದ
ಗುಮ್ಮಟದಲ್ಲಿ !

ದೈವುಳ್ಳವರಿಗೆ
ದಯವೇ ಇಲ್ಲಾ
ತಿತ್ತಿರಿ ತುಂಬಿದೆ
ಕೂಳಿನ ಕೋಟೆ
ಬಿಡುಗಣ್ಣವರಿಗೆ
ಕಾಣುವದಿಲ್ಲ ;
ಅಮೃತದ ತೇಗಿನ
ಮದವಂತಹದು !
ಹಸಿದವ ಬಲ್ಲಾ
ಹಸಿವೆಯ ಶೂಲಿ !

ಶಿವಾಶಿವಾ ಹೇ
ಶಿವಮಾದೇವಾ
ಅತ್ತಿತು ಕೂಗಿತು
ಚೀರಿತು ಜೀವಾ !
ಬಾಯಂಗಳದಲಿ

ಹುಟ್ಟಿದ ಮಾತೂ
ಮುಗಿಲಿನ ಕಿವಿಯನು
ಮುಟ್ಟಲೆ ಇಲ್ಲಾ
ಹಾಡುವ ಸಭೆಯಲಿ
ನರಳುವದುಂಟೇ ?

ಕಿಕ್ಕಿರಿ ತುಂಬಿದೆ
ಭೂಮಿಯ ಕಣಜ
ಕಕ್ಕಸ ಬಡುತಿದೆ
ಬೊಕ್ಕಸದೊಡಲು
ಬಾಳಿಗಿಂತಲೂ
ಕೂಳೇ ಮೇಲೋ ?
ಬರಿದೋ ಬರಿದೂ
ತೆರವೋ ತೆರವೂ
ಬಡವರ ಬಗ್ಗರ
ತುತ್ತಿನ ಚೀಲಾ !

ದೇವರದೊಂದು
ಗೋರಿಯ ಕಟ್ಟಿ,
ಧರ್ಮದ ಧೂಪಕೆ
ಬೆಂಕಿಯನಿಕ್ಕಿ,
ಗಣಗಣ ಬಾರಿಸಿ
ಪ್ರಾಣದ ಗಂಟೆಯ
ಸಾವಿನ ನೋವಿಗೆ
ಕಲಮಲವೆದ್ದು
ನೆಲವನ್ನೆಲ್ಲಾ

## ತುತ್ತಿನ ಚೀಲ

ತುತ್ತುವೆನೆಂದು
ಗದರುತ್ತಿಹುದು
ಗರ್ಜಿಸುತಿಹುದು
ಬಡವರ ಬಗ್ಗರ
ತುತ್ತಿನ ಚೀಲದ
ಒಳಗಿನ ಒಳಗಿನ
ಒಳದನಿಯೊಂದು

—ಅಂಬಿಕಾತನಯದತ್ತ

# ನಿತ್ಯಪೂಜೆ

ಗುಡಿಯಲ್ಲಿ ನಡೆದಿರ್ದ ಪೂಜೆಯೈಸಿರಿಯಿಂದು
ಮರೆಯಾಗಿದೆ—ಎಲ್ಲ—ಮರೆಯಾಗಿದೆ!

ಆಳತೆಯಿರದನಿತು ದೀವಿಗೆಯಿಂದು ತೊಳತೊಳಗಿ
ಬೆಳಗಿಸಿದ್ದುವು ದೇವಿಯಾ ವರದ ಮೂರುತಿಯ;
ಕಳೆದುಕೊಂಡಿಂದು ತಿಳಿನೇಯುವನು ದೀವಿಗೆಗ-
ಳಳಿದು ಕರ್ಗ್ಗತ್ತಲೆಯು ಮುತ್ತಿ ಮುಸುಕಿದೆ ಗುಡಿಯ!
ದೇವಿಯಾ ವರದ ಮೂರುತಿ ಕಾಣದಿಹುದು!
ಭಾಸ್ಕರ ಬಳಗವದು ಬೆದರಿ ಚೆದರಿಹುದು!

ಅರಳುಗಳ-ಕರ್ಪುರಾರತಿಯ–ಧೂಪದ–ಕಂಪು
ಬೆರತು ಸುಳಿಗಾಳಿಯೊಳು, ಹರಿದು, ದೂರದ ಜನರ
ಕರೆದೊಯ್ಯುತಿರ್ದ್ದಿರ್ತಲ್ಲವೆ ಬಳಿಗೆ! ಇಂದೇನು....?
ಸರಿದಿರುವ ಸೊಡರುಗಳ ಸೊವಡುಗಂಪದು ಹರಡಿ-
ಹೊರಹೊರಟು ಮೂಗ ಸೆಲೆ ಕೊರೆಯುತಿಹುದು
ನೆರೆಯುವರನೂ ದೂರ ಸರಿಸುತಿಹುದು!

## ನಿತ್ಯ ಪೂಜೆ

ಅಂದಿನಾ ಪೂಜೆಯುಪಸರದ ಮಂತ್ರಗಳೇನು !
ಒಂದೆ ದನಿಯೊಳೆ ಮೆರೆವ ಭಾವಗೀತಗಳೇನು !
ದುಂದುಭಿಯು-ಡೋಳು- ಜಾಗಟೆಗಳಬ್ಬರವೇನು !
ಇಂದದೊಂದೂ ಇಲ್ಲ ! ಎಲ್ಲಿಯೂ ಬರಿ ಮೌನ
ನುಡಿಯುತಿಹ ಹಲ್ಲಿಗಳ ಲೊಟಲೊಟನೆಯುಲಿವು
ಅಡಿಗಡಿಗೆ ಮೌನತೆಯು ಸೀಳಿ ಹೊರಡುವುವು.

ಆರಿದೇನಿದು. . . . ? ದೇವಿಯಿರುವ ಕಡೆಯಿಂದಿತ್ತ
ಬರುವ ಗಾಳಿಯೊಳು ಬೆರೆತಿರುವ ಬಿಸಿಯುಸಿರೇನು. . . . ?
ಬಿಸಿಯುಸಿರ ಬೆಂಬಳಿಸಿ ಮೆರೆವ ದನಿಯಾರದಿದು. . . . ?
ಬರಿಯ ದನಿಯಲ್ಲ ಹುರುಳಿನ ನುಡಿಯು ಕೂಡಿಹುದು !
ಗಾಳಿ ಹೇಳುವ ನುಡಿಯಿದೇನೆಂಬಿರೇನು ?
ಕೇಳಿ-ಕೇಳಿರಿ ನಸುವೆ ಕೊಟ್ಟು ಕಿವಿಗಳನು !

'ನಿತ್ಯ ಪೂಜೆಯು ಬೇಕು ! ನಿತ್ಯ ಪೂಜೆಯು ನನಗೆ !
'ಕುತ್ತುಗಳ ಕಳೆದುಕೊಳುವಾಶೆಯಿಲ್ಲವೆ ನಿಮಗೆ. . ?
'ನಿತ್ಯ ಪೂಜಿಸಲು ಬೇಸತ್ತರಾಗುವುದೇನು ?
'ನಿತ್ಯ ಪೂಜೆಯು ಬೇಕು ! ನಿತ್ಯ ಪೂಜ್ಯಳು ನಾನು !
'ಕತ್ತಲೆಗೆ ಹೆದರದಿರಿ; ಕಾಲಿಡಿರಿ ಮುಂದೆ !
'ಒತ್ತರದಿ ಬನ್ನಿರೆಲ್ಲರು ಇಲ್ಲಿಗಿಂದೆ !

'ಮುರಮುರಳಿ ಸಲ್ಲಿಸಿರಿ ವೀರಪೂಜೆಯುನೆನಗೆ!
'ವರವಾವುದನು ಕೇಳಿ, ಕೊಡುವೆ ನಾ ನಿಮಗೆ !

—ಆನಂದಕಂದ

# ಉಘೇ

ಉಘೇ ಉಘೇ ಉಘೇ
ಹಿಂದು ದೇಶ ಹಿಂದು ಹೃದಯ
ಸಿಂಧು ಗೋದೆ ಗಂಗೆಯು
ಅಂದಿಗಿಂದಿಗೆಲ್ಲ ಒಂದೆ
ಹಿಂದು ಜನ ಸ್ವತಂತ್ರರು
ಉಘೇ ಉಘೇ ಉಘೇ

ಮುಳುಗಿ ಸೂರ್ಯ ಬೆಳಗಿ ಸೂರ್ಯ
ಮುಳುಗಿ ಪರರು ಮೇಗಡೆ
ಕಳೆದು ನನ್ನ ನಿನ್ನ ಬಂಧ
ತಿಳಿಯೊ ನಾವ್ ಸ್ವತಂತ್ರರು

ಸಾಗಿ ವರ್ಷ ಮಾಗಿ ಪುಣ್ಯ
ಸಾಗಿ ಬಂತು ಸುಗ್ಗಿಯು
ತ್ಯಾಗದಲ್ಲಿ ಶಕ್ತರಾಗಿ
ಈಗ ಬೀರಿ ನಗುವನು
ಉಘೇ ಉಘೇ ಉಘೇ

ಸೋಸಿ ಸಪ್ತ ಲೋಕದಿತಿ-
ಹಾಸವೆಲ್ಲ ನೋಡಿರ
ಸಾಸಿ ಎನಿಸಿ ಬಾಳಿಬದುಕಿ
ಈ ಸ್ವತಂತ್ರದಿರವಲಿ
ಉಘೇ ಉಘೇ ಉಘೇ

— ಹೊಯ್ಸಳ

# ವೀರ ಗೀತೆಗಳು

ಕನ್ನಡನಾಡು ವೀರರ ಬೀಡು. ಆ ವೀರ ಜೀವನದ ಪಡಿನೆಳಲು ಕಾವ್ಯಗಳಲ್ಲಿ ಮೂಡುವುದು ಸ್ವಾಭಾವಿಕ. ನಮ್ಮ ನಾಡಿನಲ್ಲಿ ಊರೂರಿಗೆ ಇರುವ ವೀರಗಲ್ಲುಗಳೂ, ಮಾಸ್ತಿಕಲ್ಲುಗಳೂ ನಮ್ಮ ವೀರಜೀವನವನ್ನು ಕೈಯೆತ್ತಿ ಸಾರುತ್ತಲಿವೆ. ಅವುಗಳಲ್ಲಿರುವ ವೀರ ಗೀತೆಗಳು, ನಾಡಿನ ವೀರತೆಯನ್ನು ಘೋಷಿಸುತ್ತಲಿವೆ. ಶಿಲಾಶಾಸನಗಳಲ್ಲಿಯೂ, ತಾಮ್ರಪಟಗಳಲ್ಲಿಯೂ, ನಮ್ಮ ಪ್ರಾಚೀನ ಕಾವ್ಯಗಳಲ್ಲಿಯೂ ನಾವು ಸಾವಿರಾರು ವೀರ ಗೀತೆಗಳನ್ನು ಕಾಣಬಹುದು. ಅಷ್ಟೇಕೆ- ಗದಾಯುದ್ಧದಂಥ ವೀರ ಕಾವ್ಯಗಳೇ ನಮ್ಮಲ್ಲಿ ಉಂಟು. ನವ ಕರ್ನಾಟಕ ನಿರ್ಮಾಣದ ಈ ನವಯುಗದಲ್ಲಿ ಆ ವೀರಜೀವನಕ್ಕೆ ಮತ್ತೆ ಕಳೆಯೇರಿದೆ. ಕನ್ನಡ ಕವಿಗಳು ಹುಮ್ಮಸದ ಹಾಡುಗಳನ್ನು ಹಾಡಿ, ನಾಡಿನಲ್ಲಿ ಹುಮ್ಮಸವನ್ನು ಹಮ್ಮಿಸುತ್ತಲಿದ್ದಾರೆ.

# ನಾವು ನಿರಂಕುಶರು

ಅಂಕುಶದಂಕೆಯು ಸೊಂಕೆಂಬುದಿಲ್ಲ
ನಿರಂಕುಶರು ।
ನಾವ್ ನಿರಂಕುಶರು ಪಲ್ಲ

ಮಾಗಿಯ ಮೇಘದ
ಸೋಗಲಿ ನಾವು ।
ಜಾಗನು ಹಾಕುತ
ಹೋಗುವೆವು ॥

ಯೋಗಿಯು ಹಾಗೆ ನಾವ್
ರಾಗವನರಿಯೆವು ।
ಬಾಗುತ ಸತ್ಯಕೆ
ತಿರುಗುವೆವು ॥

ಸಿಕ್ಕಿದ ಜನರಿಗೆ ಪ್ರೇಮದ ಒಕ್ಕಲು
ಅಕ್ಕರೆಯರ್ಕನಕಿರಣಗಳು ।
ಹೊಕ್ಕೊಳು ಹರುಷವನಿಕ್ಕುತಲಿರುವೆವು
ಚಿಕ್ಕವರಾದರು ಅಕ್ಷರರು ॥

ಆಳುವ ಪರರೆಲ್ಲ ಬೇಲಿಯ ಹೊರಗೆ
ಕಾಳುಕಡ್ಡಿಯು ಬೇರೆ ಮಾಳ್ಪರು ನಾವು ।
ನಾಳಿನ ಭಾರತವಾಳುವ ಶೂರರು
ಕೇಳಿ! ನಿರಂಕುಶ ಬಾಲರು ನಾವು ॥

## ನಾವು ನಿರಂಕುಶರು

ಕಟ್ಟುಂಟು ಕುದುರೆಗೆ ಕಡಿವಾಳವುಂಟು
ಕಟ್ಟುಂಟು ಆನೆಗೆ ಅಂಕುಶವುಂಟು ।
ಕಟ್ಟುಂಟು ರಾಜಗೆ ಪರರಾಜಭೀತಿ
ಕಟ್ಟುಂಟೆ? ನಮಗೆ! ನಿರಂಕುಶರು ॥

ಮನಸೆಲ್ಲ ನಮ್ಮದು ಕುಸುಮದ ಹಾಗೆ
ಅನುವಲ್ಲಿ ಅರಳಲು ನವತರುಣಹಾಸ ।
ಮನೆ ಸೆರೆಮನೆಯೆಮ್ಮ ಬಂಧಿಸಲಾರದು
ಜನನಿಯ ಪ್ರೇಮದ ಬಾಹುಗಳಲ್ಲದೆ ॥

ಭಾವದ ಗರಿಗಳ ಮೇಲೇರಿ ಹಾರುತ
ಭಾವಿ ಪ್ರಪಂಚದಲಿರುವೆವು ನಾವು ।
ಸಾವು ನೋವೆಂಬುದರರ್ಥವನರಿಯೆವು
ನಾವು ನಿರಂಕುಶ ನಿರ್ಜರರು ॥

ಪದಬಂಧವರಿಯದ ಧಾಟಿಯೊಳಿರುವೆವು
ಒದಗಿದ ಲೀಲೆಯೊಳ್ಮರೆವೆವು ಮನವ ।
ಅದು ಯಿದುಯೆನ್ನದೆ ಮಾಳ್ಪೆವು ಕಾರ್ಯವ
ಮುದವಿದೆ ಮಾಳ್ಕೆಯೊಳು ನಮಗೆಂದು ॥

ಇತಿಹಾಸದೊಳಹೊಕ್ಕು ಅತಿಸಾಸಿಗಳಜೊತೆ
ಜೊತೆಯಲ್ಲಿ ನಿಲ್ಲುತ ಕೊಲುವೆವು ರಕ್ಕಸರ ।
ಇತಿಹಾಸದೊಳಗಣ ರಾಮರಾಜ್ಯವ ನಾವು
ಅತಿ ಬೇಗ ತರುವೆವು ಕ್ಷಿತಿಯೊಳಗೆ ॥

—ಹೊಯ್ಸಳರು

# ಕ್ರಾಂತಿಕಾಳಿ

ಕ್ರಾಂತಿಕಾಳಿ ಕಠಾರಿಯಂ ನನ್ನೆದೆಗೆ ಕುರಿತು
ಝಳಪಿಸುತೆ ಬದ್ಧಭ್ರುಕುಟಿ ಕೋಪದಲಿ ನಿಂತು
ದಂಷ್ಟ್ರ ಘರ್ಷಣರವಂ ಪೊಣ್ಮೆ ಗಜರಿದಳಿಂತು:-
ಓ ದ್ರೋಹಿ ಕವಿಯೆ, ನಿನಗಿತ್ತಾಣತಿಯ ಮರೆತು
ಕ್ಲೀಬತನದಲಿ ಹೆಣ್ಣು ಸೋಬಾನೆಗಳ ಹಾಡಿ
ಪಾಳ್ಗೆಯ್ದೆ ಕಜ್ಜಮಂ! ಶುಕ, ಪಿಕ, ವಸಂತ, ಲತೆ,
ಮುಂಗುರುಳು, ತಂಗಾಳಿ, ದೊರೆಗಿರೆಗಳಜ್ಜಿ ಕಥೆ,
ಬೆಳ್ದಿಂಗಳೆಂಬುವಂ ಸೂಕಾಚೆ, ಹೆಂಬೇಡಿ!
ಬಡತನಂ, ಗೊಬ್ಬರಂ, ಕತ್ತಿ, ಗುದ್ದಲಿ, ಹಾರೆ,
ಬೆವರು, ನೆತ್ತರ್ಗಳಂ ಗಾನಗೈವುದು ನಿನ್ನ
ಕರ್ತವ್ಯವಿಂದು. ಹಾ! ಹೊಟ್ಟೆಗಿಲ್ಲದೆ ಅನ್ನ
ಬಡ ಜನರು ಸಾಯುತಿರೆ ರಸಗಂಧವನು ತೋರೆ
ತಣಿವಹುದೆ? ಕ್ರಾಂತಿಕಾಳಿಯು ನಾನು ಕೈ ಬೀಸಿ
ಕರೆಯೆ, ಬಾ, ಪೂಜೆಗೈ ಹೃದಯ ರಕ್ತವ ಸೂಸಿ!

—ಕೆ. ವಿ. ಪುಟ್ಟಪ್ಪ

## ಬಿಡುಗಡೆ

ಇಗೊ! ಹೊರಟೆವು ಬಿಡುಗಡೆಗಾಗಿ
ಬಹ । ರಾರು ನಮಗಿದಿರಾಗಿ ॥ ಪಲ್ಲ ॥

ಇದು । ನಾಡಿನ ಪಂಚಪ್ರಾಣಾ
ಇದು । ಇಲ್ಲದ ಜನ ನಿಷ್ಪ್ರಾಣಾ
ಹಾ । ಗಾಗಿರೆ ಕಾಣಾ ಕಾಣಾ
ಇಹು । ದೆಂತು ಹೇಳೋ ಜಾಣಾ
ಅದಕಾಗಿ । ತಾಗಿ । ಸಾಗಿ । ಇಗೊ

## ಬಿಡುಗಡೆ

ತೊಳ । ತೊಳಗುದು ತಾಯಿಯ ಬಸಿರು
ಕಳೆ । ಗೊಳುವದು ನಾಡಿನ ಹೆಸರು
ತೊಳೆ । ದಳಿವುದು ಕೀರ್ತಿಯ ಕೆಸರು
ದೊರ । ಕಿಸಲೀ ಬಿಡುಗಡೆಯುಸಿರು
ಅದಕಾಗಿ । ತಾಗಿ । ಸಾಗಿ । ಇಗೊ

ಗೋ । ಣಿನೊಳಿದೆ ಬಿಟ್ಟಿಯ ನೊಗವು
ಕೆಳ । ಗೊಗೆವುದೆ ಜೀವಕೆ ಸೊಗವು
ಅಂ । ದರಳುದು ತಾಯಿಯ ಮೊಗವು
ಅದು । ವರೆಗೂ ಸೆರೆಮನೆ ಜಗವು
ಅದಕಾಗಿ । ತಾಗಿ । ಸಾಗಿ । ಇಗೊ

ಮುಗಿ । ಲೊಳಗೂ ಹಕ್ಕಿಗೆ ಹಾದಿ
ಕಡ । ಲೊಳಗೂ ಈಸಕೆ ಬೀದಿ
ಮಲೆ । ಗಳೊಳೂ ಹೊಳೆಗೂ ಕೋಡಿ
ನಮ । ಗಷ್ಟೇ ಏಕೀ ಬೇಡಿ
ಅದಕಾಗಿ । ತಾಗಿ । ಸಾಗಿ । ಇಗೊ

ತಳ । ಮಳನೇ ಕುದಿವುದು ಜೀವ
ಈ । ಎದೆಯೊಳು ಹುಟ್ಟಿದೆ ಹೇವ
ನೀ । ಪರಕಿಸಿ ನಮ್ಮೀಭಾವ
ಬೆಂ । ಬಲಕಿರು ನಮಗೆಲೆ ದೇವ
ಅದಕಾಗಿ । ತಾಗಿ । ಸಾಗಿ । ಇಗೊ ॥

— ಅಂಬಿಕಾತನಯದತ್ತ

# ನಾಡಕಾಳಿ

ನನ್ನ ನಾಡ ಚೆನ್ನ ನಾಡ
ಬನ್ನ ಬಡುತ ಪೊರೆಯುವ
ನನ್ನಿಯಿಂದ ತಾಯಿನಾಡ
ಹೊನ್ನ ಸಿರಿಯ ಬೆಳಗುವ

ನಾಡ ಒವರ ಬವಣೆಯಲ್ಲಿ
ಜೀವವನ್ನು ನೀಡುವ
ಹೇಡಿತನವ ಹೊಡೆದು ಹಾಕಿ
ರೂಢಿಯಲ್ಲಿ ಮೆರೆಯುವ

ನಾಡನುಡಿಯು ನಾಡನಡೆಯು
ನಾಡಿನಲ್ಲಿ ನಡಿಸುವ
ಕಾಡುತಿರುವ ಕಾಡುಜನರ
ಕೋಡು ತಾನೆ ಉಡಿಯುವ

ನಾಡಮೇಲ್ಮೆ ನೋಡಿಯೊಡಲು
ಪೊಡವಿಯೊಡೆಯನಡಿಯಲಿ
ಬೇಡಿಕೊಂಡು ಪೊಡವಿಗಿಳಿದು
ಬಡವರಿಂಗೆ ಬಡಿಸಲಿ

ಚತುರತನದೆ ಜಾತಿಮತವ
ರೀತಿನೀತಿಗಿಳಿಸುವ
ಜಾತಿಮತಕೆ ಸೋತುಬಿದ್ದ
ಮಾತೆಯನ್ನು ಎತ್ತುವ

## ನಾಡಕಾಳಿ

ಜಾತಿ ಬೆಳಿಸಿ ಆತುಕೊಂಡು  
ಘಾತಿಸಿರ್ಪ ಜನರನು  
ಭೀತಿ ಬಿಡಿಸಿ ಹೂತುಬಿಟ್ಟು  
ಸಾತಿಶಯದೆ ಮೆರೆಯುವ

ನನ್ನ ಮಾತು ನಿನ್ನ ಮಾತು  
ಹೊನ್ನ ಮಾತದೆನ್ನದೆ  
ಉನ್ನತಾಗ್ರ ಸಭೆಯ ಮಾತ  
ಮನ್ನಿಸೆಲ್ಲ ನಡೆಯುವ

ಕಾವನನ್ನು ಕಾಂಬ ಬಗೆಯು  
ಕಾಣೆ ಬೇರೆ ತರದಲಿ  
ನಾಡಸೇವೆಗಾಗಿ ತನುವ  
ನೀಡೆ ದೇವ ಕಾಂಬನು

ದೇವರಿಂದ ಬಂದ ನಾವು  
ದೇವರಾಗಿ ಮೆರೆಯುವ  
ಜೀವಕಂಜಿ ಹೆದರಿ ಹೆದರಿ  
ಸಾವ ಜನರ ಕರೆಯುವ

ನಾಡಧರ್ಮ ರೂಢಿಯಲ್ಲಿ  
ನಾಡೆ ತಾನೆ ನಡಿಸುವ  
ನಾಡದೇವಿ ಬೀಡಿನಲ್ಲಿ  
ಕೂಡಿಯಾಡಿ ಮೆರೆಯುವ.

—ಸ. ಪ. ಗಾಂವಕರ

# ಎದ್ದೇಳು! ಎದ್ದೇಳು !

ರಾಗ: ಕಾಂಬೋದಿ, ತಾಳ: ಝಂಪೆ

ತೂಕಡಿಕೆಯನು ಕಳೆಯು | ದೇಕೆ ಕುಳಿತಿಹ ಗೆಳೆಯ |
ಸಾಕು ಸುತ್ತಲು ನೋಡು ಕಣ್ದೆರೆದು ನಿಂದೂ ||
ಲೋಕದಲಿ ವಂದೆಮಾತರವೆಂಬುದೊಂದೆ ಪದ |
ಈ ಕಿವಿಯನೊಡೆಯುತಿದೆ | ನುಚ್ಚಳಿಸಿ ಬಂಗೂ ||

ಮತಜಾಲದೊಳ್ ಸಿಲುಕಿ | ಅತಿ ಜಾತಿಯೊಳು ಕುಹಕಿ |
ಗತಿಗೆಟ್ಟು ಸರ್ವರಲಿ ನೀನಾದಿ ಹಿಂದೂ ||
ಪತಿತರಿಗೆ ಕೈಗೊಟ್ಟು ಭಾರತಧ್ವಜ ನೆಟ್ಟು
ಪಥದೋರೆ ಗಾಂಧಿ, ನೀ, ನಡೆ, ಧೀರ ಮುಂದೂ ||

ನುಗ್ಗು ನುಗ್ಗುತ ಪರರು, ಮುಗ್ಗುತ್ತ ಬರುತಿಹರು |
ಒಗ್ಗಿರದೆ ಬಾಗುವದೆ, ನಿನಗಾಯಿತಿಂದೂ ||
ಹಗ್ಗವಿಲ್ಲದ ಕಟ್ಟು, ಬೆತ್ತವಿಲ್ಲದ ಪೆಟ್ಟು |
ಹೊಗ್ಗಿತೇ ಈ ಗತಿಯು ಸವಿವಿಷವ ತಿಂದೂ ||

## ಎದ್ದೇಳು ! ಎದ್ದೇಳು !

ಚಿತ್ತವ್ಯಸನಾಕುಲೆಯು । ಕುತ್ತಿಗೆಯ ಸಂಕೋಲೆಯು ।
ಕತ್ತರಿಸುತೆನ್ನ ಸೆರೆ ಬಿಡಿಸಬೇಕೆಂದೂ ॥
ನೆತ್ತಿಬೊಟ್ಟನು ಇಡದೆ ಬಿರುದುಬಾವಲಿ ತೊಡದೆ ।
ಅತ್ತತ್ತು ಹಲಬುತಿದೆ, ಭೂಮಾತೆಯಿಂದೂ ॥

ಸತ್ತಿತೇ ಸಾಹಸವು, ಬತ್ತಿತೇ ಧೃತಿರಸವು ।
ಮತ್ತೆ ಮಡಿದಾಕರ್ಣ, ನಾ ಬೆನ್ನಹಿಂದೆ ॥
ಎತ್ತು ಪೋದುದೊ ಪರಶುರಾಮನಾ ತೋಳ್ತಿರಿಸು ।
ನೆತ್ತರೊಳಗಿಲ್ಲವೈ ವಿಕ್ರಮದ ಬಿಂದೂ ॥

ಕಳವಾದ ಮೇಲ್ ನೀನು, ಕಳವಳಿಸಿ ಫಲವೇನು ।
ಕಳದಪುದೇ ಸ್ವಾತಂತ್ರ್ಯಮಣಿಯು ನಿನಗಿಂದೂ ॥
ಕೆಳಕೋಟಿ ಕೈಸೋಂಕೆ ಕಹಳೆ ಕೂಗುವುದೇಕೆ ।
ಕಳಚಿಬಿಡು ಅಧ್ಯಾತ್ಮಸಿದ್ಧಿ ಮಮ ಬಂಧೂ ॥

ಎದ್ದೇಳು ಎದ್ದೇಳು, ನಿದ್ದೆಕಣ್ಣೇವೆ ಕೀಳು ।
ಪೊದ್ದಿರ್ದ ವೇದಕಂಬಳಿ ಮೂಲೆಗೊಂಡು ॥
ಎದ್ದುಬರುತಿರೆ ಭಾನು, ಎದ್ದಿತ್ತೈ ಜಾಪಾನು ।
ಬಿದ್ದುಕೊಂಡಿರುವೇಕೆ? ಕತ್ತಲೆಯೊಳಿಂದೂ ॥

ತಳರು ಭರತಕುಮಾರ ಸತ್ಯಬಲದಿಂ ಧೀರ ।
ಝಳಪಿಸುತಲಸಹಕಾರಾಯುಧವನಿಂದೂ ॥
ಆಳುತದಲೆ ಧರ್ಮಯುದ್ಧದಿ ಕಾದುಕಲಿತನವ ।
ತಳೆದು ಭಾರತಮಾತೃ ಸೌಭಾಗ್ಯಕಿಂದೂ ॥

—ದಿವಂಗತ ಎಂ. ಎಸ್. ಕಾಮತ-

## ಬಾ ಹೊರಗೆ ಸನ್ಯಾಸಿ !

ಬಾ ಹೊರಗೆ ಸನ್ಯಾಸಿ !
ಅಲ್ಲಿ ಏಕಾಂತದಲಿ
ಸಾಧಿಸುವೆ ಏನನ್ನು ?
ಬಾ ಹೊರಗೆ ನೋಡಿಲ್ಲಿ
ಶತಕೋಟಿ ಯೋಜನ ವಿ-
ಶಾಲ ವಿಶ್ವದ ಸ್ಥಿತಿಯು !
ಕಾದಿಹುದು ನಿನಗಾಗಿ
ದೇಶಸೇವೆಯಃ ಪೂಜೆ !

## ಬಾ ಹೊರಗೆ ಸನ್ಯಾಸಿ !

ಅನ್ನ ಅಂಬಲಿಯಾಗಿ
ದುರ್ದೆಶೆಗೆ ತುತ್ತಾಗಿ
ಹೊರಳಾಡುತಿದೆ ಎಲ್ಲ
ಲೋಕ; ಬರಗಾಲದಲಿ
ಮುಳುಗಿ ತಳಮಳಿಸುತ್ತ
ಕಂಗೆಟ್ಟು ನರಳುತಿದೆ !
ಹೊಲೆ ಮೀರಿ ಹೊಲಸಾಗಿ
ನಾರುತಿದೆ ಜಗವೆಲ್ಲ !

ಏಕಾಂತ ಧ್ಯಾನವಿದು
ಅವನ ಮುಟ್ಟುವುದೆಂತು !
ದೀನ ಜನರೆದೆಯುರಿಯ
ಜ್ವಾಲೆಯಲಿ ಪರಮಾತ್ಮ-
ಸಾನಿಧ್ಯವಿದೆ ನೋಡು !
ಬಾ ಹೊರಗೆ ಸನ್ಯಾಸಿ !
ಆ ಜ್ವಾಲೆಯನು ತಣಿಸು.
ಅದು ಸೇವೆ ! ಅದೆ ಪೂಜೆ !

ನೀತಿ ಕುಲಕೆಟ್ಟಿಹುದು
ಧರ್ಮ ಕುರುಡಾಗಿಹುದು
ಕರ್ಮನೆಲ ಹಡಿಲಾಗಿ
ಹಾಳು ಬಿದ್ದಿದೆ ನೋಡು !
ಆಯ ತಪ್ಪಿದ ಜಗದ
ಮಾನವ ಸಮಾಜವನು
ಕಟ್ಟುನಿಟ್ಟಿಗೆ ತರಲು
ಸಾಧಿಸೈ ಸನ್ಯಾಸಿ !

ದುಡಿವ ಮೈ ಕಸದಿಂದ
ಕಡೆಯಾಗಿ, ಪರಮ ಪಾ-
ವನವಾದ ಬೆವರು ಹನಿ
ಒಚ್ಚಲಿನ ಕೊಚ್ಚೆಗಿಂ
ತಲು ಹೀನವೆಂದೆನಿಸಿ
ಜೀವನದ ಬಲ ಕುಂದಿ
ಲೋಕ ತಳಮಳಿಸುತಿದೆ
ನೋಡು! ಓ, ಹಠಯೋಗಿ.

ಸುವ್ಯವಸ್ಥೆಯು ಅಸ್ತಿ
ವಾರ ನೆಲೆತಪ್ಪಿ, ಅಲು
ಗಾಡುತಿದೆ; ಹಳೆ ಜಾತಿ
ನೀತಿ ಧರ್ಮಗಳೆಲ್ಲ
ಹಳತಾಗಿ ಹಳಸಿ ಹಾ-
ಳಾಗಿಹವು; ಹಿಂದಿದ್ದ
ಕಟ್ಟು ಕಟ್ಟಳೆ ಎಲ್ಲ
ಕೊಳೆ ನಾರುತಿದೆ ಇಂದು.

ಹೊಸ ನೀತಿ ಹೊಸ ಜಾತಿ
ಹೊಸ ಹೊಸತೆ ಬೇಕಯ್ಯ!
ಹೊಸತಾಗ ಬೇಕೆಲ್ಲ.
ಹೊಸತಾದ ತಳಹದಿಯು
ಮೇಲೆ ಹೊಸ ಧರ್ಮವನು
ನಿಲಿಸಿ ಲೋಕದ ಕ್ಷೇಮ
ಸಾಧನೆಗೆ ಹೆಣಗಾಡಿ
ಹೆಣವಾಗಬೇಕಿಂದು!

## ಬಾ ಹೊರಗೆ ಸನ್ಯಾಸಿ !

ಕಾವಿ ಒಟ್ಟೆಯ ಸುಟ್ಟು
ಕೆನೆಹಾಲು ಮೊಸರುಂಡು
ನಿಶ್ಚಿಂತನಾಗಿರುತ
ಸುಖದ ಸೊಗಸನು ಸವಿದು
ಧ್ಯಾನಮಾಸನನಾಗಿ
ಓಂಕಾರ ಜಪದಿಂದ
ತೃಪ್ತನಾದರೆ ಸಾಕೆ !
ಹೇಳು, ಓ ಸನ್ಯಾಸಿ !!

ವಿಶ್ವವನೆ ಕರಗಿಸುವ
ಬಡತನದ ಕುಲುಮೆಯಲಿ
ನಿನ್ನ ಶಕ್ತಿಯನೆಲ್ಲ
ಪುಟವಿಟ್ಟು ಹಳೆಕಂತೆ-
ಗಳ ಸುಟ್ಟು ಜಗದಸಂ-
ತೆಯ ಜನದ ಸೇವೆಯಲಿ
ಬದ್ಧಕಂಕಣನಾಗಿ
ಬಾ, ಹೊರಗೆ ಸನ್ಯಾಸಿ !

ಧ್ಯಾನಯೋಗವ ಬಿಟ್ಟು
ಕರ್ಮಯೋಗವ ತೊಟ್ಟು
ಹೃದಯದಲಿ ಹುದುಗಿರುವ
ಆ ಸುಪ್ತ ಬ್ರಹ್ಮನನು
ಚೇತರಿಸಿ ಹೊಸ ಶಕ್ತಿ
ಯನು ಹೊಂದು; ಎಲ್ಲಿ ಹುಡು
ಕುವೆ ನೀನು ? ಬಾ, ಹೊರಗೆ
ಮುಕ್ತಿ ಅಡಗಿಹುದಿಲ್ಲಿ !

—ಮಟ್ಟಿಮಲೆ ಶಂಕರನಾರಾಯಣ ರಾವ್

# ಸ್ವಾರ್ಥತ್ಯಾಗ

ಧಾಟಿ: 'ಕಡುಧೀರನೆ ಶೂರನೆ ನಾರಿಯು'

ನಿಜದೇಶಕೆ ಹಿತಸಾಧನೆ ಗೈಯಲು ಮನಕ್ಲೇಶವೇಕೈ ॥

ತಾನು ಮೇಲು ಮತ್ತಿನ್ನವ ಮೇಲೆನ ।
ಲೇನಿದೆ ನಿಖಿಲರ ಹಿತಕರ ಕಾರ್ಯದೀ ।
ಸಾನುರಾಗದಿಂದೊಮ್ಮನಸಿರಲದೇ । ಧನ್ಯವಲ್ತೇ ॥

ರಾಣನೇನು—ಗುಲಾಮನೇನು, ಅತಿ ।
ಜಾಣನೇನು ಪಾಮರನೇನೈ, ಪರಿ ।
ತ್ರಾಣಕೆ ಕೈಗೂಡಿದುದೆ ಪ್ರಮಾಣವು । ಪುಣ್ಯವಲ್ತೇ ॥

ದೇಶವೊಂದುಳಿಯೆ,-ಅಳಿದವರಾರೈ ।
ದೇಶವೊಂದಳಿಯೆ,-ಉಳಿದವರಾರದು ?
ದೇಶ ಸಾಯಲೆನುವುದೆ ಕಾಪುರುಷರ । ಸ್ವಾರ್ಥವಲ್ತೇ ॥

—ದಿವಂಗತ ಎಂ. ಎನ್. ಕಾಮತ

# ಕರ್ನಾಟ ವೀರರೇಳಿ

ದಾಟಿ: 'ಚರಖಾ ಚಲಾ ಚಲಾಕೆ'

ಕರ್ನಾಟ ವೀರರೇಳಿ । ರಣಭೇರಿ ಕೊಂಬ ಕೇಳಿ ।
ಸ್ವಾತಂತ್ರ್ಯ ಮಂತ್ರವನು ಹೇಳಿ । ಪರದಾಸ್ಯ ದೇಹ ಸೀಳಿ ॥ ಪಲ್ಲ ॥

ಪರತಂತ್ರ ಕತ್ತಲೆಯು ಹಾರಿ । ಸ್ವಾತಂತ್ರ್ಯ ಸೂರ್ಯ ತೋರಿ ।
ಭಾರತಿಯ ಜೀವ ಕಳೆಯೇರಿ । ಪರವೈರಿಗಾಯ್ತು ಮಹಾಮಾರಿ ॥

ಧುರಧೀರ ಬುಕ್ಕ ಮಾಧವರು । ಪುಲಿಕೇಶಿ ವೀರ ವಿಕ್ರಮರು ।
ಸ್ವಾತಂತ್ರ್ಯಮಂತ್ರ ಸಾಧಿದರು । ಪರರಾಜರನ್ನು ಮೆಟ್ಟಿದರು ॥

ಲಾಲಾಜಿ ಲಾಠಿ ಹೊಡೆತದಲಿ । ಕಲಿ ಜತಿನದಾಸ ಬಹು ಬಳಲಿ ।
ನಿಮಗಾಗಿ ಕೊಟ್ಟರಾತ್ಮಬಲಿ । ಕುಳಿತಿಹರು ನಗುತ ಸ್ವರ್ಗದಲಿ ॥

ಭಾರತದ ರಕ್ತವನು ಹೀರಿ । ವೀರತೆಯ ಕುಕ್ಕಿ ನೆಲಕೂರಿ ।
ಭಾರತಿಯ ಮಾನವನು ಮಾರಿ । ಮಾಡಿದರು ನಾಡ ಸೆರೆಸೂರಿ ॥

ಹಿಂದೀಯ ಸಾರ್ವಭೌಮಾ । ಆ ಗಾಂಧಿಯೇ ಮಹಾತ್ಮಾ ।
ಸ್ವಾತಂತ್ರ್ಯಕಾಗಿ ಕಲಿ ಭೀಮ । ಸೇನಾನಿ ನಿಂತ ನಿಸ್ಸೀಮ ॥

ಸ್ವಾತಂತ್ರ್ಯ ಸ್ವಾಭಿಮಾನ । ಹೊಮ್ಮಿಕ್ಕಿ ಕಾದಿರಣ್ಣಾ ।
ಧುಮ್ಮಿಕ್ಕಿ ರಣದೊಳಿನ್ನಾ । ಹಗೆಯನ್ನು ಮೆಟ್ಟಿರಣ್ಣಾ ॥

— ಶೇಜೀಬ

# ಪ್ರಯಾಣ

ಪೋಗುವೆವು ಸಮರಸಮ್ಮುಖಕೆ ನಾವು ।
ಬೇಗಲೈತನ್ನಿರಿ ಸಲವಿಂದ ನೀವು ।
ಚಲದಿಂದ ನೀವು । ಬಲದಿಂದ ನೀವು ॥ ಪ ॥

ಎಮಗೆ ಯಾರುಂಟು ಜಗದೊಳಗೆ ಜೋಡಿ ? ।
ಅಮರದಾನವರ ಕಾಳಗಕೆ ಹೂಡಿ ।
ಎಮ್ಮ ಸೌಭಾಗ್ಯಕೆಣೆಯುಂಟೆ ಸಮನುಂಟೆ ?
ಒಮ್ಮೊಗದೆ ವೀರರೇ ನೀವಿಂದು ಬನ್ನಿ ।
ಪೆರ್ಮೆಯೊಳು ಬೇಗ ಬನ್ನಿ । ನೂರ್ಮಡಿಯೊಳೀಗ ಬನ್ನಿ ॥

ಭಾರತಿಯು ಕಾಲ್ಕೆರಗಿ ದಳದವರ ಕೂಡಿ ।
ಭಾರತರ ಏಳ್ಗೆಯನು ಕುರಿತು ಪಾಡಿ ।
ಯಾರು ವೈರಿಗಳಾದೊಡೇನೆಮಗೆ ?

## ಪ್ರಯಾಣ

ಕೂರಾಳುಗಳು ಮೂವತ್ತು ಕೋಟಿಯಿಹೆವು ॥
ಕೂಗುವರು ಕೂಗಲಿ, ಪೋಗುವರು ಪೋಗಲಿ ।
ಸಾಗಿ ಕಾದುವ ನಾವು, ಮುಂದೆ ಹೋಗಿ ಕಾದುವ ನಾವು
ಜಗವು ತಲೆದೂಗೆ ।
ಘೂರಕರೆ ನೀವು ಬನ್ನಿ । ಮರಾಠರೆ ನೀವು ಬನ್ನಿ ॥

ಹಂದೆಗಳು ನಾವಂತೆ ಕೇಳಿ ಸೋದರರೆ,
ಸಂಗರದಿ ತೋರುವ, ಕೂರಸಂಗರದಿ ತೋರುವ
ಎಮ್ಮ ಬೀರವಸು ॥
ಪಂಜಾಬರೆ ನೀವು ಬನ್ನಿ । ಬಂಗೀಯರೆ ನೀವು ಬನ್ನಿ ॥

೨

ತೋಳಬಲುಮೆಯ ಜಾಣ್ಮೆ ಅರಿಗೆ ತೋರಿಸುವ ।
ಮೇಲು ಮಲ್ಲಾಳ್ತನದ ಬೆಡಗ ಹಾಯಿಸುವ ॥
ಯೋಧತನದದಟಿಂ ಹಟವ ಸಾಧಿಸುವ ।
ಯೋಧಕೋಟಿಯ ಮಾನವುಳಿಸಿ ಕೂರಿಸುವ ॥
ಸುಮ್ಮನಿರುತಿರ್ದವರ ಕೂಗಿ ಕರೆದಿಹರು ।
ನಮ್ಮವರು ಗತಸತ್ವರೆಂದು ಜರೆದಿಹರು ॥
ಧರ್ಮಕಂಜಿದ್ದವರ ಬಯಲಿಗೆಳೆದಿಹರು ।
ದುರ್ಮಾನಗೈದಿಹರು ಸರಿಯರಿದಿರಲ್ಲಿ ॥
ಸಿಂಹಳರೆ ನೀವು ಬನ್ನಿ । ಬರ್ಮೀಯರೆ ನೀವು ಬನ್ನಿ ॥

ಗಂಡುತನ ಬೀರಗಳ ಪರಿಕಿಸುವ ಸಮಯ ।
ಪುಂಡುಮಲೆಕಂಧರ ಮುರಿವ ಸಮಯ ॥
ಘೋರಾಪಮಾನದಿಂ ಭಂಗಪಡುತಿಹ ಸಮಯ ।
ವೀರಕಲಿಗಳು ಕೂಡಿಪೋರೆ ಸತ್ಸಮಯ ॥

ಪಾರ್ಶೀಕರೆ ನೀವು ಬನ್ನಿ । ನಾನಕನ ಅನುಚರರೆ ನೀವು ಬನ್ನಿ॥

ಪೆತ್ತ ತಾತದಿರತ್ತ ಪೊತ್ತ ತಾಯಿಯರಿತ್ತ ।
ಸತ್ತು ಸ್ವರ್ಗದೊಳಿರ್ಪ ವೀರರೆಲ್ಲತ್ತ ॥
ಮುತ್ತಿದರಿಭಟವಿಕಟದಪಹಾಸ್ಯಗಳ ಪೋಗಿ ।
ಕೊತ್ತಿ ನಿಲಿಸಿರಿಯೆಂದು ಆಜ್ಞೆಯಿತ್ತಿಹರು ॥
ಕರ್ನಾಟರೆ ನೀವು ಬನ್ನಿ । ತೇಲಂಗರೆ ನೀವು ಬನ್ನಿ ॥

ಅಲಸತನಗಳ ಬಿಟ್ಟು ಗೆಲುವಿನಲಿ ಮನನಟ್ಟು ।
ಕುಲಗೌರವಂಗಳಸು ಕಾಯೆ ನಡುಗಟ್ಟಿ ॥
ಜಲಧಿಯುಬ್ಬರದಲ್ಲಿ ತೆರೆವಾಲೆ ಬರ್ಪಂತೆ ।
ಚಲದುರುಬುರೋಷಗಳ ಕೂಡಿ ಬನ್ನಿ ॥
ಕಾರ್ಮುಗಿಲ ಕರ್ವೆಳಗನೊಳಪೊಕ್ಕು ಹೂಂಕರಿಸಿ ।
ಘೂರ್ಮೊರೆವ ಬರಸಿಡಿಲ ತೆರದೆ ನಾವ್ ಗರ್ಜಿಸುವ ।
ಅರಿಮದವ ಮರ್ದಿಸುವ ಐತನ್ನಿರೀ ॥

ವೀರ ರಜಪೂತರೆ । ಧೀರ ಗುಜರಾತರೆ ॥

ವೈರಿಯ ಮುಂದಳವು ಗುಂಡು ಕರೆವುದು ನೋಡಿ ।
ಪೇರ್ಗುರಿಯ ಭೇದಿಸಲು ಶಕುತಿ ಪೂಡಿ
ಭಾರತಿಯ ಮೇಲಿನಾಣೆ ॥
ಎಮ್ಮಮ್ಮ ! ಭಾರತಿಯ ಮೇಲಿನಾಣೆ ॥
ಜಯಜಯ ಜಯಜಯ ಜಯ ಭಾರತಿಗೆ ಜಯವೆಂದು ।

ಜಯಘೋಷೆಯಂ ಮಾಡಿರಿ, ನಲಿಯಿರಿ, ।
ಕಲಿಯಿರಿ ಸ್ವಾತಂತ್ರ್ಯಮಂತ್ರ್ಯಂ । ನಿಜತರ ರಾಜತಂತ್ರಂ ॥

—ವಿ. ಸೀ.

## ಏಳಿರಿ

( ಗುಜುಗುಜು ಮೂಪುರ ಎಂಬಂತೆ )

ಏಳಿರಿ ಏಳಿರಿ ಬಲುಬೇಗ । ಬೆಳಗಾಗಿದೆ ಏಳಿರಿ ಬೇಗ ।
ಏಳಿರಿ ತೊರೆಯುತ ನಿಮ್ಮ ಭೋಗ । ಬಲು ।
ಯೋಗದ ಹರಿ ಬಂದಿಹನೀಗ ॥ ಪಲ್ಲ ॥

ನೀತಿಯನ್ಯಾರೂ ಬಿಡಬೇಡಿ
ಜಾತಿಯ ಭೇದವ ತರಬೇಡಿ ।
ಮಾತುಗಳಾಡುತ ಕೆಡಬೇಡಿ । ನೀವು ।
ಕಡಿಯಿರಿ ನಮ್ಮ ದೇಶದ ಬೇಡಿ ॥

ಶೂರತನವ ಬಿಟ್ಟು ಬಲು ಬಳಲಿದಿರೈ
ಪಾರತಂತ್ರ್ಯದೊಳಗೆ ನೀವು ಮುಳುಗಿದಿರೈ ।
ಶೂರತನದ ಸಾರವನು ತೊರೆದಿಹಿರೈ । ನೀವು ।
ಪಾರತಂತ್ರ್ಯನರಕದೊಳಗೆ ಕೊಳೆದಿಹಿರೈ ॥

ದೇಶವಿದ್ಯಾರದು ತಿಳಿರಯ್ಯ
ಕೋಶವಿದ್ಯಾರದು ತಿಳಿರಯ್ಯ ।
ದೇಶದ ದೋಷವ ಕಳೆರಯ್ಯ । ನೀವು
ದಾಸ್ಯದ ಪಾಶವ ಕಡಿರಯ್ಯ ।

ಭರತಮಾತೆ ತೊರೆಹಾಲು ಕುಡಿದಿಹಿರಿ
ಕೊರತೆಯಿಲ್ಲದಮೃತವ ಸವಿದಿಹಿರಿ ।
ಭರತಭೂಮಿಯುದರದೊಳು ಜನಿಸಿದಿರಿ । ನೀವು
ಭರತತಾಯಿ ಋಣವನು ತೀರಿಸಿರಿ ॥

ಭರತಭೂಮಿಸೇವೆಯಲಿ ತನುಮನವ
ಭರತಭೂಮಿಯೇಳ್ಗೆಗಾಗಿ ತಮ್ಮ ಜೀವಾ ।
ಭರತಭೂಮಿಗಾಗಿ ತಮ್ಮ ಎಲ್ಲ ಧನವಾ । ಬಿಟ್ಟ ।
ಭರತಭೂಮಿಭಕ್ತರನು ವಂದಿಸುವಾ ॥

—ಶ್ರೀಧರ

# ಯಾರೆಂಬರು ಮುಗಿದುವೆಂದು ಬವರಂ ?

ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ (ಗೀತಾ ೨-೩೭)

ಯಾರೆಂಬರು ಮುಗಿದುವೆಂದು ಬವರಂ?
ನಂಬದಿರದು ಮರುಳರ ಮಾತೆ;
ನರನೆನ್ನೆವರಂ ನರಸನ್ನೆವರಂ
ರಣಾಂಗಣವೆ ಶಾಂತಿಯ ಮಾತೆ!
ಶಾಂತಿಯೆ ನಿನ್ನಯ ಸಾಧನವಾಗೆ
ಸದಾ ಸಿದ್ಧವಿರು ಯುದ್ಧಕೆ ಸಾಗೆ.

ಯುದ್ಧವಿಲ್ಲದಭಿವೃದ್ಧಿಯದುಂಟೆ?
ಯುದ್ಧದೆ ಮನುಜತೆಯ ವಿಕಾಸಂ–
ಬೆಂಕಿಯೊಳಲ್ಲವೆ ಕಬ್ಬಿಣ ದಾಂಟೆ
ಯಂತ್ರ ತಂತ್ರ ಶಕ್ತ್ಯಯ ಸಾಸಂ?
ಯೋಧನಾದ ನರನಮರ ಸಮಾನಂ
ಯೋಧನೆಂದೆ ಸೃಷ್ಟಿಯ ಯಜಮಾನಂ.

ಕಟ್ಟಳೆಯೊಳೆ ಹಳಸಿದ ಬಾಳುವೆಗೆ
ಯುದ್ಧದಿ ನವಯೌವನ ಸಿದ್ಧಿ;
ಪರವಶತೆಗೆ ನಾಚದ ತಾಳುವೆಗೆ
ಯುದ್ಧದೊಳಾ ಪಾಪದ ಶುದ್ಧಿ;
ಯುದ್ಧವೆ ಮೃತಜೀವನದುತ್ಥಾನಂ,
ಯುದ್ಧವೆ ಉತ್ಕ್ರಾಂತಿಯ ಸೋಪಾನಂ.

‘ ಯಾರೆಂಬರು ಮುಗಿದುವೆಂದು ಬವರಂ ? ’

ನರತೆಯೊಂದೆ ನರನಾದಡನೇಕಂ,
ಏಕಾರ್ಥದ ಮಂದಿಯೆ ಜನತೆ ;
ಜನತೆ ಜನತೆಯೊಳಗಿರದು ವಿವೇಕಂ–
ಸ್ವಾರ್ಥಕೆಲ್ಲವಲ್ಲವೆ ತನತೆ ?
ಸ್ವಾರ್ಥತೆ ಪರಾರ್ಥದಲಿ ಕೆಯ್ಮಾಡೆ
ಸಂಗರವಾ ಪ್ರಸಭವನೀಡಾಡೆ.

ಸರ್ವಜೀವಿಗಳೊಳೊರ್ವನೆ ಮನುಜಂ
ಪರಹಿತ ಗೆಯ್ಯಲೆಂದೊಗೆತಂದು,
ತನ್ನ ಹಂಗನವಮನ್ನಿಸಿ ದನುಜಂ
ತಾನೆನೆ ಪರರಲಿ ಮಲೆವಂದು,
ಕೇಸುರಿ ಬಲೆಯಾ ಕೇಸರಿಗೆಂತು
ಸಮರವಾತನಂ ಕಮರಿಸಲಂತು.

ಸಾಲದು ನರಜನ್ಮವ ಒರಿದೆತ್ತೆ-
ಜನ್ಮಮಾತ್ರವೇತರ ಕಾರ್ಯಂ ?
ನರನಹೆಯಾ ? ದುಡಿ ನರತೆಯ ವೃತ್ತಿ–
ದ್ವಿಜನಾಗದ ಮನುಜನನಾರ್ಯಂ !
ಪರರಳಲಿನ ಪರಿಹರಿಕೆಗೆ ಸಂದು
ಹೊಸಬಾಳೆತ್ತಿದವನೆ ದ್ವಿಜನಿಂದು.

ಅನ್ಯನಲ್ಲ, ನೀನೆನ್ನ ನನ್ನ ಯೋಧಂ !
ಕಾದೆನಲಾ ಪ್ರಕೃತಿಯೆ ನಿನಗೆ,
ಕಟ್ಟಾಜ್ಞೆಯದಕೆ ತಟ್ಟೆ ವಿರೋಧಂ
ಎಲ್ಲಿನೆಲ್ಲಿಗುರುಳಿದೆ ಕೊನೆಗೆ !
ಕತ್ತಿಗೆ ಬಾರದ ಕಬ್ಬಿಣ ಬಾಗಿ
ನುಟ್ಟಪುದನುದಿನ ನಟ್ಟುಗವಾಗಿ.

ಅಳಿವೆಯೊ? ಉಳಿವೆಯೊ? ಪ್ರಶ್ನೆಯನಿತ್ತೆ-
    ಮುೂರನೆಯದಿಲ್ಲ ನಿನಗಾಯೆ;
ಕಾದದಡೆ ಸಾವಿಗವುತಣವಿತ್ತೆ,
    ಕಾದೆ ಸದೆದೆ ಸಾವನೆ ಸಾಯೆ!
ಪ್ರಬಲರಬಲರಂ ಕಬಲಿಸೆ, ಹಗೆಯಾ
ಕಾದೊ ಕಾದದೆಯೊ ಬದುಕುವೆ, ಬಗೆಯಾ!

ಕಾದೆ ಸಾವೆನೆಂದಕಟಾ ಗಾಸಿಯೊ?
    ಕಾದದವರಿಗಿಲ್ಲವೆ ಸಾಯೆ?
ಕತ್ತಿಯಾಗಿ ಹಾಯೆ ಸಾಯೆ ವಾಸಿಯೊ?
    ನಾಲದಂತೆ ಕಾಲಲಿ ತೇಯೆ?
ಸಾವಿಗಂಜೆ ಸಾವಿರ ಸಲ ಸತ್ತೆ,
ಸಾವನಂಜದವನೊವ್ಮೆಯನಿತ್ತೆ.

ಕಾದೆ ಸಾವೆನೆಂದೆಲ್ಲಿಗೆ ಸರಿಯೆ,
    ಬಾಳ್ವೆ ಸಾವಿನೊಳೆ ನೆರವೇರೆ?
ಬಾಳ್ವೆ ಬಾಳತಕ್ಕುದೊ ನಾನರಿಯೆ,
    ಸಾವು ಸಾಯುತಕ್ಕುದು ನೇರೆ!
ಧರ್ಮಯುುದ್ಧವೊಂದಲ್ಲದೆ ಬೇರೆ
ದಾರಿಯೆ ವೀರಸ್ವರ್ಗವನೇರೆ?

ಸೆರೆಗೇಕಂಜುವೆ? ಸೆರೆಯಾಳಲ್ಲವೆ
    ತನ್ನ ಮನೆಯೊಳನ್ಯರ ತೊತ್ತು?
ಸಿಕ್ಕ ಮಡೆಯ ಮುುಕ್ಕುವ ಗಿಳಿ ಬಲ್ಲವೆ
    ಗೂಡೊ ಬೀಡೊ ಎನುವಾ ಗೊತ್ತು?
ಬಸುರಲಿ ಸೋಸಿಲ್ಲವೆ ನೀ ಸೆರೆಯಾ?
ಹೊಸ ಹುಟ್ಟಿನ ಬಸಿರಾ ಸೆರೆಯರಿಯಾ!

' ಯಾರೆಂಬರು ಮುಗಿದುವೆಂದು ಬವರಂ ? '

ತನ್ನ ಕೆಡುಕನೆಲ್ಲ ಮುನ್ನ ಕಾದು,
ತಾಯಿಳೆಯ ಬಿಡುಗಡೆಗೆ ಕಾದು,
ನರತೆಯ ಸರಿಸೋದರತೆಗೆ ಕಾದು,
ಮನುಜನ ವಿಮೋಚನೆಗೆ ಕಾದು,
ಹೊಸತೆ ಭವಿಷ್ಯವನೊಸಯಿಸೆ ಕಾದು,
ಬದುಕಿದೊಂದು ಕೊಳುಗುಳವೆನೆ ಕಾದು.

ನೀನಜರಾಮರನಹೆಯಾ? ಕಾದು–
ನರರಿಗೆ ಪೆರತಮರತೆಯೊಳವೆ ?
ಕಂಚೊ ಕಲ್ಲೊ ಕತೆ ಕವಿತೆಯೊ ಕಾದು
ನಿನ್ನನುಳಿಸೆ ನಿನಗಿನ್ನಳಿವೆ ?
ಗೆದ್ದರೆ ಹೊಸ ಹೊತ್ತೆದ್ದುದು ಮುಂದೆ,
ಬಿದ್ದರೆ ನೇಸರಿನುದ್ದಕೆ ನಿಂದೆ !

ನಿನಗೆ ಕಾದೆನುವೆನಿದೊ ಧರ್ಮರಣಂ,
ಪರಾಕ್ರಮಣವದು ರಣವಲ್ಲ;
ಪರರ ಬಿಡುವಿನಪಹರಣವೆ ಮರಣಂ—
ಬಿಡುವ ತುಡುಕಿ ಕೆಡದವರಿಲ್ಲ.
ಬಿಡುಗಡೆ ಎನೆ ಜನಜನತೆಯ ಸೊತ್ತು,
ಕಳೆವನು ಸೆಳೆವನು ನಿಯತಿಯ ತುತ್ತು.

ಸಗ್ಗದಿಂದ ಸೋನೆಯಂತೆ ಸುರಿಯದು,
ಬಿಡುಗಡೆ ಗಡ ಬಾರದು ಬರಿದೆ !
ಕಾಯ್ವೊಡೆಯಗೆ ಬರಿ ಬಾಯ್ವಡೆ ದೊರೆಯದು-
ಕಾದದ ಕೆಯ್ಗೊಂದಿಗುಮರಿದೆ !
ದುಡಿಯದೆ ಪಡೆದಾ ಬಿಡುಗಡೆಯಲ್ಲ–
ರಣಹೇಡಿಗೆ ದೇವರ ನೆರವಿಲ್ಲ.

ಆಯುಧವಿಲ್ಲೆಂದೆದೆಗೆಡಬೇಡ—
ಯೋಧನೆತ್ತಲತ್ತಲೆ ಕತ್ತಿ!
ಸಾಧಕನೆ ತನ್ನ ಸಾಧನ, ನೋಡ,
ಹೇಡಿ ಏವನಾಯುಧವೆತ್ತಿ?
ಮನದೊರೆಯಲಿ ನಿನಗಸುವಹ ಸಿರಿಯಾ
ಹೊತ್ತು ಕಾವ ಬಗೆಗತ್ತಿಯ ಹಿರಿಯಾ!

ನೆರವಿಗೆ ಯಾರೆಂದೇತಕೆ ಖಿನ್ನ?
ಕಾದಿಸುವೊಡೆಯನೆ ಜತೆಗಿಲ್ಲಾ?
ಎಂದಿನಿಂದ ಕಾದಪನಿದೊ! ನಿನ್ನ
ನುಳಿದು ತಾನೆ ಕಾದುವನಲ್ಲ!
ಕಂಡಿಸೆದೆಯನಿಡು ಗಂಡಡಿ ಮುಂದೆ
ನೂಕು ರವೀಂದು ಪತಾಕೆಯ ಹಿಂದೆ.

ಕೇಳದೆ ಜಗದೀ ಗೋಳಿನ ಕಾಳೆ?
ಕಳಕಳಿಸದೆ ನಿನ್ನೆದೆಯಾರ?
ನಾಳೆ ಎಂಬ ಜಡಗೆಂದಿಗು ನಾಳೆ,
ಬಂದೆನೆಂಬ ಕುದುರೆಗೆ ಹಾರ!
ಜೀವನ ರಣರಂಗದಿ ಮುಂಬರಿಯಾ,
ಜಯ ಶಾಂತಿ ಎಂದಶಾಂತಿಯನಿರಿಯಾ!

—ಎಂ. ಗೋವಿಂದ ಪೈ

# ಒಂದೇ ಕರ್ನಾಟಕ ಗೀತ

('ನಾಸ್ತಿ' ರಿಕಾರ್ಡು ಕಂಪನಿಯವರು ಬ್ರಾಡ್ ಕಾಸ್ಟ್ ಮಾಡಿದ
'ಹರ್ ಬಂಡರ್' ಇವರ ಗೀತ.)

ಹದಿನೆಂಟು ಲಕ್ಷ ನಾಸ್ತಿ ಸಂಗಡದವರು ಒಕ್ಕೊರಲಿನಲ್ಲಿ ಹೇಳುವ ಹಾಡು !

**ಒಂದೇ ಒಂದೇ ಒಂದೇ ಕರ್ನಾಟಕ ಒಂದೇ** ॥ ಪಲ್ಲ ॥

೧

ಇಂದೇ ಮುಂದೇ ಎಂದೇ ಕರ್ನಾಟಕ ಒಂದೇ
ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೇ ॥
ಇಲ್ಲಿಯ ಜನ ಮನ ಭಾಷೆಯು ಕನ್ನಡವದು ಒಂದೇ
ಒಂದೇ ಜನವೂ ಮನವೂ ಕನ್ನಡಿಗರು ಎಂದೇ
ಕುಲವೊಂದೇ ಸ್ಥಲವೊಂದೇ ನೀತಿಯ ನೆಲೆಯೊಂದೇ ॥
ಹೀಗೆನ್ನದ ಹೆರವರು ಅವರಿದ್ದರು ಒಂದೇ ಇರದಿದ್ದರು ಒಂದೇ ॥

## ಒಂದೇ ಕರ್ನಾಟಕ ಗೀತ

ಕನ್ನಡವೆಂದೂ ಒಪ್ಪದು, ಕರ್ನಾಟಕ ನಿಂದೇ
ಒಂದೇ ಒಂದೇ ಒಂದೇ ಕರ್ನಾಟಕ ಒಂದೇ ॥

೨

ಕನ್ನಡ ಮಾತೇ ಮಾತೆಯು, ಕರ್ನಾಟಕ ಒಂದೇ
ಅದು ದೈವತ ಅದು ಜೀವಿತ ಒಪ್ಪಿಹೆವದುವೆಂದೇ ॥
ನಮ್ಮದು ನಿಮ್ಮದು ಅವರದು ಈ ಆಸ್ತೀ ಪಾಸ್ತೀ
ನಾಡಿನ ತಾಯಿಗೆ ಸೇರಿದೆ, ಬೇರೆಯು ಮನೆ ನಾಸ್ತೀ
ಕನ್ನಡ ಕಾಯಕದಲ್ಲಿಲ್ಲವು ಕಮ್ಮೀ ಜಾಸ್ತೀ ॥
ಇದನೊಪ್ಪದ ಹೆರವರು ಅವರಿದ್ದರು ಒಂದೇ ಇರದಿದ್ದರು ಒಂದೇ ॥
ಕರ್ನಾಟಕ ಹಿತವಿಹಿತವು ಕನ್ನಡಕುಲದಿಂದೇ
ಒಂದೇ ಒಂದೇ ಒಂದೇ ಕರ್ನಾಟಕ ಒಂದೇ ॥

೩

ಕನ್ನಡವೂ ಭಾರತವೂ ಜಗವೆಲ್ಲವು ಒಂದೇ
ತುಂಬಿದೆ ಕನ್ನಡಕುಲವನ್ನೊಪ್ಪುವ ಕುಲದಿಂದೇ ॥
ಕನ್ನಡ ದೀಕ್ಷೆಯು ಹೊಂದಿದ ಪ್ರತಿಯೊಬ್ಬನು ಆರ್ಯ
ಕನ್ನಡ ತೇಜವು ಸಾರಲಿ ಕನ್ನಡಿಗರ ಕಾರ್ಯ
ಕನ್ನಡ ನಡೆ ಇರದವರೇ ಶೂದ್ರರು ಅನಿವಾರ್ಯ ॥
ಇಂತರಿಯದ ಹೆರವರು ಅವರಿದ್ದರು ಒಂದೇ ಇರದಿದ್ದರು ಒಂದೇ ॥
ಉಗ್ಗಡಿಸಿರಿ ನಾಸ್ತಿಗೆ ಜಯ ಜಯ ಜಯವೆಂದೇ
ಒಂದೇ ಒಂದೇ ಒಂದೇ ಕರ್ನಾಟಕ ಒಂದೇ ॥

### ಎಚ್ಚರ!

“ಕನ್ನಡವನೊಪ್ಪದ ಬೇರೇ ಯಾರಾದರೂ ಈ ಗೀತವನ್ನು ಪ್ರಸಿದ್ಧ ಪಡಿಸಿದರೆ ಅವರಿಗೆ ಕನ್ನಡದೀಕ್ಷೆ ಕೊಡಲಾಗುವದು.”

—ಅಂಬಿಕಾತನಯದತ್ತ

# ಶಿಲಾಶಾಸನಗಳು

## ಹವಮಲ್ಲ

ಂದಿಂ **ಮಾಳವ** ಮೋಳುಮೊಯ್ದು ವಿಳಯುಕ್ಕೆಯ್ದಿತ್ತು ಸಂದಿರ್ದ**ಕೊಂ-**
ವೋಳುಂ **ಮಲೆಯೋಳು** ಮುಂಜಿ ಬೆಸಕೆಯ್ದುತ್ತೊವದಾಂತಾಹವಾಂ-
ದೊಳ್ **ಚೋಳಿಕೆನಣ್ಮಿ** ಸತ್ತ**ನಖಿಳದ್ವೀಪಾವನೀಪಾಳಕಾ-**
ಕೆಗಳ್ ಕಪ್ಪಮನಿತ್ತರೇನದಟನೋ ತ್ರೈಳೋಕ್ಯಮಲ್ಲಾಧಿಪಂ ॥

—ಶಿಕಾರಿಪುರ ಶಾಸನ ೧೧೮

## ಂಗರಾಜನ ವೀರ

ಣ ಭೂಮಿಭಾಗದೊಳಗನ್ಯರದೇಕೆ ಭವತ್ ಪ್ರತಾಪಸಂ-
ಯು ವರ್ಣನಾವಿಧಿಗೆ ಗಂಗಚಮೂಪ ಜಿಗೀಷುವೃತ್ತಿಯಿಂ-
ದ ನಿನ್ನ ಕೆಯ್ಯ ನಿಶಿತಾಸಿಯು ತೌವೊನೆ ಬೆನ್ನ ಬಾರನೆ-
ತ್ತಿರೆ ಪೋಗಿ ಕಂಚಿ ಗುರಿಯುಪ್ಪಿನ ವೋಡಿದ ದಾಮನೆಯ್ದನೇ ॥

—ಮಳವಳ್ಳಿ ಶಾಸನ

# ನಾಗನ ಮಗ ಕೇತ

ಛಟ ಛಟ ಛಚ್ಛಟಚ್ಛಟ ಎನಲ್ ಮುರಿದತ್ತಿದಿರಾಂತ ಬೀರರಂ
ಘಟೆಘಟೆ ತಾಗೆ ನುರ್ಗಿದುದು ಕೋಳೆಲುಗಳ್ ನೆಳಿಲುಂ ನೆಡಿಲ್ಲೆನಲ್ ।
ಭಟರರನೇಕರಂ ಭರದೆ ಸೀಳ್ದುದು ಸರ್ರೆನೆ ಸರ್ರೆನಲ್ ಮದೋ-
ತ್ಕಟಮಿಂದೆ **ಕೇತನೆಂಬ** ಕಲಿ ನಾಗ ಗವುಂಡನ ಗಂಧವಾರಣಂ ॥

ಧರಣೀ ದರ್ಪಿಷ್ಠ ಸಾಮಂತಗರುರವಲಗುದ್ದಂಡ ವಿದ್ವಿಷ್ಟ ಸಾಮಂ-
ತರ ಸೇನಾವಾರ್ಧಿಯಂ ಗೋಳಿಡೆ ಕದಡುವ ಮಂಥಾಚಲಂ
ಧೂರ್ತಸಾಮಂ-।
ತರ ಬೇರಂ ಕಿಳ್ತು ವಾರಾಶಿಯೊಳಲೆವಸುರಂ ಪುಚ್ಚರಂದೋರ್ಪ ಸಾಮಂ-
ತರನಾಟಂದೊತ್ತಿ ಗೋಣಂ ನುಲಿದು ಬಿದಿರ್ವ ಮಾಕಾಳಿ ಸಾಮಂತ
**ಕೇತಂ** ॥

**ತರಿಕೆರೆ ಶಾಸನ**

# ವೀರಗಲ್ಲು

## ಚಟ್ಟನಾಯಕ

ಚಟ್ಟನೃಪಾಳಕಂಬೆರಸು ಪಾಂಡ್ಯನುಪೋವದೆ ನೇಲಿಪರ್ತಿಯಂ
ತೊಟ್ಟನೆ ಪಾಯ್ದು ಜೀವಧನಮೆಲ್ಲಮನಾಗಳೆ ಕೊಂಡು ಪೋಗೆ ಚೆ-
ನ್ನಟ್ಟಿ ತೆರಳ್ಚಿ ತಳ್ತಿರಿದು ಪೆರ್ವಡೆಯಂ ತುರುವಂ ಮಗುಳ್ಚಿ ತಾಂ
ಚಟ್ಟಿಯ ನಾಯಕಂ ಪಡೆದು ಮೆಚ್ಚಿಸಿದಂ ಸುರಕನ್ಯೆಯರ್ಕಳಂ ॥

ಮಲ್ಲನೃಪಾಲಕಂ ಬೆಸಸೆ ಪೆರ್ಗಡೆಮಲ್ಲನ ಪುತ್ರನಾಜಿಯೊಳ್
ತಲ್ಲಳಮುಪ್ಪಿನಂ ಪಗೆಗೆ ಸರ್ರನೆ ಕಿಳ್ತಲಗಿಂ ತುರಂಗಮಂ
ಬಿಲ್ಲಣಿಯಂ ಕರುತ್ತಿರಿದು ಚೆಚ್ಚರಮಾತುರುವಂ ಮಗುಳ್ಚಿ ತಾ
ನಿಲ್ಲದೆ ಚಿಕ್ಕ ಚಟ್ಟನಮರಾಂಗನೆಯರ್ಕಳೊಳೊಲ್ದು ಕೂಡಿದಂ ॥

ಕಂಡದೊಳಿಂಡೆಯಾಡಿ ಬಿಸುನೆತ್ತರೊಳೋಕುಳಿಯಾಡಿ ಪೆರ್ಚೆ ಮಾ-
ರ್ಕೊಂಡೊಡನೆಚ್ಚ ಪೂಣಿಗರ ಪಂದಲೆಯಂ ಪೊಡೆಸೆಂಡನಾಡಿದೊ-
ಳ್ಗಂಡನಿವಂ ದಲೆಂದು ಪೊಸ ಮುತ್ತಿನ ಸೇಸೆಯನಿಕ್ಕಿ ಕೂಡೆ ಕೈ
ಕೊಂಡೊಡನೊಯ್ದರಚ್ಚರಸೆಯರ್ ಕಲಿ ಚಟ್ಟನ ನಾಜಿರಂಗದೊಳ್ ॥

—ಹೊನ್ನಾಳಿ ವೀರಗಲ್ಲು

**(ಈ ವೀರಗಲ್ಲಿನಲ್ಲಿ ಸಿಂದರಾಜನಾದ ಮಲ್ಲಿದೇವರಸನ ಆಜ್ಞೆಯಿಂದ ಚಟ್ಟ ನಾಯಕನು ತುರುಗೋಳಿನಲ್ಲಿ ಕಾದಿ ವೀರ ಸ್ವರ್ಗವನ್ನು ಪಡೆದನೆಂದು ಹೇಳಿದೆ)**

# ಮಾಸತಿಕಲ್ಲು

## ದೇಕಬ್ಬೆ

ನುಗುನಾಡಿನ ಅಧಿಪತಿಯ ಮಗಳೂ ನವಿಲೆನಾಡಿನ ಅಧಿಪತಿಯ ಸತಿಯೂ ಆದ **ದೇಕಬ್ಬೆಯು** ಯುದ್ಧದಲ್ಲಿ ತನ್ನ ಗಂಡನು ಮಡಿದವಾರ್ತೆಯನು ಕೇಳಿ ಸತಿ ಹೋದ ಸಂಗತಿಯನ್ನು ವಿವರಿಸುವ ಮಾಸಗತಿಗಲ್ಲಿದು.

ಜೆಟ್ಟಿಗನೆನೆ ನೆಗೞ್ದ ಹಿತ ಘ
ರಟ್ಟಂ ಸುಖವಿರ್ದು ತನ್ನ ದಾಯಿಗರಂ ತ
ಳ್ತೊಟ್ಟಜೆಯಿನಿಱಿದಡವನಂ
ನೆಟ್ಟನೆ ತಲೆಕಾಡಲುಯ್ದು ಕೊಂದಂ ನರಪಂ

ಕಲಿಕಾಲವೇಳನೆನಿ? ದ
ಕಲಿ ಚಾಗಿಯುಸಿಱಿದು ಕೊಂದರೆಂಬುದು ಮಾತಂ
ಲಲಿತಾಂಗಿ ಕೇಳ್ದು **ರವಿಗನ**
ಕುಲದೀಪಕಿ ಸಾಯಲೆಂದು ಕೊಂಡಕೆ ಸಡೆದಳ್

ತಂದೆಯುಮಬ್ಬೆಯುಮೊಡನೆಯು
ಬಂಧುಗಳುಂ ಬಂದು ಮಗಳೆ ಸಾಯದೆ ಮಾಣ್ ನೀ
ನೆಂದೆಲ್ಲಂ ಕಾಲ್ವಿಡಿದಡ
ಸಿಂದಿತೆ ದೇಕಬ್ಬೆ ಮುನಿದು ಬಗ್ಗಿಸಿ ನುಡಿದಳ್

ನುಗುನಾಡಧಿಪತಿ ರವಿಗನ
ಮಗಳಾಗಿಯುಮಂತೆ ನವಿಲೆ ನಾಡಧಿಪತಿಗಾಂ
ನೆಗಱ್ತೆ ಸತಿಯಾಗಿ ಬಾೞ್ವುದು
ಬಗೆದರ್ಪ್ಪನೆ **ಕೊಟ್ಟ ಕೊಂಡ** ಮನೆಯ ಸಮಱಿಯಲ್

ಎಂದು ಪರಿಚ್ಛೇದಿಸಿ ನಯ
ದಿಂದಂ ದೇವಂಗೆ ತೋಂಟಖಂಡದ ಮಣ್ಣಾಂ
ನಂದಾದೀವಿಗೆಗಿತ್ತರ ।
ಎಂದಾಸನೆ ಸಲೆ ನಿವೇದ್ಯಕೆಂದಸುನಯದಿಂ

ಮಡದಿ ಸಲೆಗೇಳಿಗಱ್ತಿಯ
ಪಡುವಣ ಕಡೆಯಲ್ಲಿ ತೆಂಕಲಯ್ಗೊಳ ಬೆಳೆಯುಂ
ಕಡುಗೂರ್ತು ಕೊಟ್ಟು ನುಗುನಾ
ಡೊಡೆಯನ ಕುಲಪುತ್ರಿ ಪೆೞ್ಚಿ ಮತ್ತಂ ಮತ್ತಂ

ನೆರೆದೆಲ್ಲಂ ಬೇಡ ಮಾಣೆಂದಡೆ ನುಡಿಯದಿರಿಂ
ಪೋಗಿಮಾಂ ಮಾಣೆನೆಂದಾ-
ದರದಿಂದಂ ಭೂಮಿ ಪೊಂಪುಟ್ಟಗೆ ಪಸುಧನಮುಂ
ದಾನಮುಂ ನೀಡುತುಂ ದೇ-
ವರದೇವಂಗೞ್ತಿಯಿಂ ಕಯ್ಮುಗಿದುರಿವುರಿಯಂ
ಪೊಕ್ಕು ದೇಕಬ್ಬೆ ತನ್ನಂ
ಧರೆಯೆಲ್ಲಂ ಮೆಚ್ಚಿ ನಿಚ್ಚಂ ಪೊಗೞೆ ನೆಗೞ್ತೆಯಿಂ
ದೇವಲೋಕಕ್ಕೆ ಪೋದಳ್

ಶ್ರೀರಮಣಿ ಗೌರಿ ಶಚಿ ಧಾರಿಣಿಯು ಪುತ್ರಿ ರತಿ ಭೂರಮಣಿ
ಯಂದದ ಸರೂಪವಟಿೀವ್ರೊಳ್ವಾ
ದಾರೆ ಜಯಧಾರೆ ಜಸಧಾರೆ ನಯಧಾರೆ ಭಯಹಾರೆ
ಪತಿಭಕ್ತಿ ಧೃತಶಕ್ತಿಯೆನೆ ಸಂದೀ
ವೀರನಿಧಿಯಂ ಚಲದ ವಾರಿನಿಧಿಯಂ ಗುಣದ
ಚಾರುನಿಧಿಯಂ ನೆಗಟ್ದಿ ದೇಕಲೆಯನಿಂತೀ
ನಾರಿಜನರನ್ನ ಮನದಾರೊಮಟಿವರ್ ಸಕಳ
ಧಾರಿಣಿಯೊಳಿಂತು ವರಕಾಂತೆ ದೊರೆಯಾವಳ್

ಪಂಡಿತಾಶ್ರಯಂ ನುಗುನಾಡ ರಾಘವಂ ಮುನಿವರ ಸಿಂಗ
ಮೋಚಕದಾವಳಂ
ಚಂಡವಿಕ್ರಮಂ ಕುಡಿಯರವಲ್ಲಭಂ ಕಲಿಕಾಲ
ಕರ್ಣಂ ಮಚ್ಚರಿಪವರ ಗಂಡಂ
ವಂದಿ ಚಿಂತಾಮಣಿ ಶಿವಪಾದ ಶೇಖರಂ ನಿಜಸುತೆಗನು
ರಾಗದಿಂ
ಮಂಡಲಕ್ಕೆಲ್ಲಂ ಪಡಿಛಂದವಾಗೆ ಶಿಲಾಸ್ತಂಭಂ
ಶಾಸನವಾಗೆ ನಟ್ಟಂ.

ಬೆಳ್ತೂರು (ಮೈಸೂರಜಿಲ್ಲೆ) ಶಾಸನ ೧೭೯
ಎಪಿಗ್ರಾಫಿಕಾ ಇಂಡಿಕಾ ೬ನೇಭಾಗ
ಪು.೨೬

# ಧ್ವಜಗೀತೆಗಳು




— ಕರ್ನಾಟಕ ಧ್ವಜ —

ಭಾರತ

ಕರ್ನಾಟಕ

# ಧ್ವಜಗೀತೆಗಳು

ಧ್ವಜವೆಂದೊಡನೆಯೇ ನಮ್ಮ ನಾಡಿನ ಧ್ವಜವೆಂಬುದೊಂದುಂಟೇ ? ಎಂಬ ಕಲ್ಪನೆಯು ಒಮ್ಮೆ ಮಿಂಚಿಹೋಗುವದು. ರಾಜ್ಯಸಾಮ್ರಾಜ್ಯಗಳ ಕಾಲದಲ್ಲಿ ಆ ಸಾಮ್ರಾಟರ ಧ್ವಜವೇ ನಾಡಿನ ಧ್ವಜವಾಗುತ್ತಿದ್ದಿತು. ಭಾರತವು ರಾಜ್ಯ ಸಾಮ್ರಾಜ್ಯಗಳ ಕ್ರೀಡಾಭೂಮಿಯು. **ಸಾಮ್ರಾಟರಾದ ಪಾಂಡವರ ಕಪಿ ಧ್ವಜವೇ** ಭಾರತದ ಧ್ವಜವಾಗಿದ್ದಿತು. ಅಶೋಕ ಸಾಮ್ರಾಟನ ಕಾಲದಲ್ಲ **ಸ್ವಸ್ತಿಕವು** ಭಾರತದ ಧ್ವಜವಾಗಿ ಮೆರೆಯಿತು. ಆನಂತರ ಭಾರತದ ಸಾಮ್ರಾಟರಾದ ಚಲುಕ್ಯರ **ವರಾಹಧ್ವಜವು** ವೈದಿಕಧರ್ಮದ ಕೀರ್ತಿಯನ್ನು ಜಗತ್ತಿನಲ್ಲಿ ಮೆರೆಯಿಸಿತು.

**ಸಿಂಹಧ್ವಜ**ರಾದ ಕದಂಬರೂ **ಗಜಧ್ವ**ಜರಾದ ಗಂಗರೂ ಕನ್ನಡನಾಡಿನಲ್ಲಿ ಸುಪ್ರಸಿದ್ಧರು. ಸಾಮ್ರಾಟರಾದ ಚಾಲುಕ್ಯರ **ವರಾಹ** ಧ್ವಜವೂ ರಾಷ್ಟ್ರಕೂಟರ **ಗರುಡ** ಧ್ವಜವೂ ಕನ್ನಡದ **ಕೀರ್ತಿ**ಯನ್ನು ಭಾರತದಲ್ಲೆಲ್ಲ ಹರಡಿದವು. ಕಲು ಚುರ್ಯರ **ವೃಷಭ**ಧ್ವಜವೂ, ಯಾದವರ ಕಪಿಧ್ವಜವೂ, ಹೊಯ್ಸಳರ **ಗಜ- ಹೊಯ್ಸಳ** ಧ್ವಜಗಳೂ ದಕ್ಷಿಣಾಪಥದಲ್ಲೆಲ್ಲ ತಮ್ಮ ದರ್ಪವನ್ನು ಒಂದು ಕಾಲಕ್ಕೆ ಮೆರೆಯಿಸಿದವು. ವಿಜಯನಗರದ **ವರಾಹ** ಧ್ವಜವಂತೂ ಅಖಿಲ ಭಾರತದ ಹಿಂದೂಧರ್ಮದ ಪ್ರತೀಕವಾಗಿ ಜಗತ್ತಿನಲ್ಲಿ ಮೆರೆಯಿತು. ಇಂದಿಗೂ ಮೈಸೂರೊಡೆಯರ ಗಂಡಭೇರುಂಡವು ಮೈಸೂರಿನಲ್ಲಿ ಹಾರಾಡುತ್ತಿದೆ.

ರಾಜ್ಯಸಾಮ್ರಾಜ್ಯಗಳ ಯುಗವು ಮುಗಿದು ಪ್ರಜಾಪ್ರಭುತ್ವದ ಮನ್ವಂತರವು ತಲೆಯೆತ್ತಿ ಬಾಳಲು ಬಯಸುತ್ತಿದೆ. ಜನಾಂಗ-ನಾಡುಗಳು ಇಂದು ಪ್ರಚೋದಕ ಶಕ್ತಿಗಳಾಗಿವೆ. ತನ್ನ ನಾಡಿಗೆ, ತನ್ನ ಆಶೆ-ಆಕಾಂಕ್ಷೆಗಳಿಗೆ, ಉಚಿತವಾದ ನಾಡಗುಡಿಯನ್ನೆತ್ತಿ, ಜನಾಂಗಗಳು ಮುಂದರಿಯುತ್ತಲಿವೆ. ಚರಕಾ ಯುಕ್ತವಾದ ತ್ರಿವರ್ಣಧ್ವಜವು ಇಂದು ನವಭಾರತದ ಪ್ರತೀಕವಾಗಿ ಸ್ಫೂರ್ತಿಯನ್ನೀಯುತ್ತಲಿದೆ.

ಈ ಜಾಗೃತಿಯೇ ಕನ್ನಡಿಗರಲ್ಲಿ ತಮ್ಮ ನಾಡಿಗೊಂದು ಧ್ವಜವಿರಬೇಕೆಂಬ ಬಯಕೆಯನ್ನು ಹುಟ್ಟಿಸಿತು. ಕನ್ನಡನಾಡು ಒಂದು ಪ್ರಾತಿನಿಧಿಕ ಮಂಡಳವನ್ನು ನಿಯಮಿಸಿತು. ಆ ಮಂಡಳವು ೧೯೨೪ ರಲ್ಲಿ ಬೆಳಗಾವಿ ಕಾಂಗ್ರೆಸ್ಸಿನ ಸಮಯದಲ್ಲಿ **ಗಜವೃಷಭ ಯುಕ್ತವಾದ ಧ್ವಜವು** ( ಈ ಪುಟದ ಹಿಂಬದಿಯಲ್ಲಿರುವದೇ ) ಕರ್ನಾಟಕ-ಧ್ವಜವೆಂದು ನಿರ್ಣಯಿಸಿತು. ಅದಕ್ಕೆ ಅಖಿಲ ಕನ್ನಡ ಜನಾಂಗವು ತನ್ನ ಒಪ್ಪಿಗೆಯ ಮುದ್ರೆಯನ್ನೊತ್ತಿ ಸ್ವೀಕರಿಸಿತು. ಧ್ವಜಗಳು ಇಂದು ನಾಡಿನ-ಜನಾಂಗದ ಪ್ರತೀಕವಾಗಿ, ಸ್ಫೂರ್ತಿಯ ಶೆಲೆಗಳಾಗಿವೆ. ಆ ಸ್ಫೂರ್ತಿಯೇ ಧ್ವಜಗೀತೆಗಳ ರೂಪದಿಂದ ಹೊರ ಹೊಮ್ಮುತಿದೆ—

# ನಮ್ಮ ಧ್ವಜವು

ಇದು ತಪೋನಿಧಿ ಗಾಂಧಿ ಕಲ್ಪಿಸಿದ ಧ್ವಜವು ।
ಇದು ಭರತಸಂತತಿಯ ಸರ್ವಸ್ವವು ॥ ಪ ॥

ಇದು ನಮ್ಮ ನಾಡಿನಧ್ಯಾತ್ಮಶಕ್ತಿಧ್ವಜವು
ಇದು ನಮ್ಮ ತಾಯ್ನಾಡ ಸೌಭಾಗ್ಯವು ।
ಇದು ನಮ್ಮನಾಡ ಪುಣ್ಯಪ್ರಕರ್ಷಧ್ವಜವು
ಇದು ನಮ್ಮ ತಾಯ್ನಾಡ ಚೈತನ್ಯವು ॥

ಇದರ ದರ್ಶನವೆಮಗೆ ಪರಮಪುಣ್ಯಪ್ರದವು
ಇದರಿಂದೆ ತೇಜಸ್ಸಿನುತ್ಕರ್ಷವು ।
ಇದರ ನೆರಳೊಳೆ ನಮ್ಮ ಸ್ವಾತಂತ್ರ್ಯಮಂದಿರವು
ಇದರಿಂದೆಯೇ ವಿಶ್ವದಭ್ಯುದಯವು ॥

ಇದರ ರಕ್ಷಣದಿಂದೆ ನಮ್ಮ ಸಂರಕ್ಷಣವು
ಇದರ ಮಾನವು ನಮ್ಮ ಸನ್ಮಾನವು ।
ಇದರ ಪಾವನಕೀರ್ತಿ ಸಕಲಭುವನವ್ಯಾಪಿ
ಇದು ಜಗಕೆ ಮಂಗಲವು ನಮ್ಮ **ಧ್ವಜವು**

—ಸಾ. ರಾ.

## ನಾಡಗುಡಿ

ಬಾ ಬಂದೆಯಾ ಹೊತ್ತೆ ! ಬಾಗಿ ಎತ್ತುವೆನಿಂದು ನಾಡಗುಡಿಯನ್ನು
ಕೈಯೊಳ್
ಬಾ ಬಂದೆಯಾ ವೀರ ಪೂರ್ವಜರ ಪುಣ್ಯವೆ ಚರಿಸಿಂದು ನನ್ನ
ಮೈಯೊಳ್ ॥

ನನ್ನ ದೇಶದ ಗುಡಿಯು ಸಡಗರಕ್ಕಾಗೀಗ ಗುಡಿಯನ್ನು ಎತ್ತಿಹಿಡಿದೆ
ನನ್ನ ದೇವರ ಮಮತೆ ಮುಗಿಲಿನಂಗೈಯಾಗಿ ಚಾಚಿರಲು
ಮುಂದೆ ನಡೆದೆ ॥

ಜೀವಜ್ಯೋತಿಯ ಬೆಳಕು ನಾಡ ಹಸರಿನ ಸೆಳಕು ದೇವರಾಗದಲಿ
ಬೆರೆಯೆ
ಹೇವ ಹುಟ್ಟಿತು ಜೀವ ಭಾವಗಳ ಹೊಟ್ಟೆಯಲಿ ಹೊರಟೆ ನಾ
ಮೈಯ ಮರೆಯೆ ॥

ಜಯನಾದ ನಾಲಿಗೆಯ ತುದಿಯಲ್ಲಿ ಮೊಳಗುತಿದೆ ಭಯವಿಲ್ಲ
ಎದೆಯ ಬದಿಯೊಳ್
ಜಯವೆಂದು ಮುಳುಗಿದೆನು ದೇಶಭಕ್ತಿಯ ಪೂರ ಬಂದಿರಲು
ರಾಷ್ಟ್ರನದಿಯೊಳ್॥

— ಅಂಬಿಕಾತನಯದತ್ತ

# ನಮ್ಮ ನಾಡಗುಡಿ

ಜಯ ಭುವನೇಶ್ವರಿ ಜಯ ಭುವನೇಶ್ವರಿ
ಜಯ ಭುವನೇಶ್ವರಿ ನೀವೆನ್ನಿ ।
ಗುಡುಗಿನ ದನಿಯಲಿ ಕನ್ನಡತನದಲಿ
ದಿಗ್ವಿಜಯಕೆ ಹೊರಡುವ ಬನ್ನಿ ॥ ಪಲ್ಲ ॥
ಗುಡಿಯನು ಹಿಡಿಯಿರಿ ಗಗನದಿ ಹಾರಿಸಿ
ಕನ್ನಡ ನಾಡಿನ ನಾಡಗುಡಿ
ಪುಲಿ । ಕೇಶಿಗೆ ಗೆಲುವನು ಕೊಟ್ಟ ಗುಡಿ
ಸಿರಿ । ವಿಕ್ರಮ ಮೆರೆಸಿದ ಗಂಡು ಗುಡಿ
ಸೊಕ್ಕಿದ ಹಗೆಗಳ ಬೊಗ್ಗಿಸಿ ಮೆರೆಯುವ
ಸೋಲರಿಯದ ಕರಿನಾಡಗುಡಿ.
ಭಾರತ ವೀರರ ವೀರತೆ ತೋರುವ
ಮೂರು ಬಣ್ಣದೀ ನಾಡಗುಡಿ
ವರ । ಗಾಂಧಿ ಮಹಾತ್ಮನು ಕೊಟ್ಟ ಗುಡಿ
ಸ್ವಾ । ತಂತ್ರ್ಯದ ಕಿರಣವು ನಮ್ಮ ಗುಡಿ
ಬೀರುತೆ ಭುವನಕೆ ಭಾರತ ತೇಜವ
ಹಗೆಯ ಕಣ್ಣ ಕುಕ್ಕಿಸುವ ಗುಡಿ.
ಗುಡಿಯನು ನಾಡೊಳು ಮೆರೆಸುತ ನಡೆದೆವು
ನಾಡಗುಡಿಯು ಮಾನವೆ ಮಾನ
ಗುಡಿ । ಗಾಗಿ ಮುಡಿಪು ನಮ್ಮಯ ಪ್ರಾಣ
ರಣ । ರಂಗದಲ್ಲಿ ಬಂದರು ಮರಣ
ಪರ । ವೈರಿಗೆಂದಿಗನ್ನೆವು ಶರಣ
ಫಡಫಡಿಸುವ ಗುಡಿಜಸವನು ಹೊಗಳುತೆ
ಕಡುಗಲಿತನದಲಿ ಕಾದುವೆವು
ರಣವನು ಗೆದ್ದೇ ಮರಳುವೆವು.

—ಹೇಜೀಬ

## ನಾಡಗುಡಿ

ನೋಡಿರಣ್ಣಾ ನೋಡಿ ನಮ್ಮ
ನಾಡಿನೀ ನಿಶಾನೆಯನ್ನು
ಕೂಡಿ ಮೂರು ಬಣ್ಣದಿಂದೆ
ನಾಡಗುಡಿಯು ಮೆರೆವುದು ॥ ಪಲ್ಲ ॥

ಕೆಂಪು ಹಸರು ಬಿಳಿಯ ಬಣ್ಣಾ
ಇಂಪು ದನಿಯ ರಾಟಿಯಣ್ಣಾ
ಕಂಪು ತೋರಿ ಜಗವನೆಲ್ಲ
ಸೊಂಪುಮಾಡಿ ಮೆರೆವುದು

ಹಿಂದುಗಳಿಗೆ ಕೆಂಪು ಬಣ್ಣಾ
ಕುಂದನುಳಿದ ಶುಭದ ಚಿನ್ಹ
ಹಿಂದೆ ಸರಿಯದಂಥ ವೀರ
ರಿಂದೆ ಮೆರೆವ ರಕ್ತ ಬಣ್ಣಾ

ಹಸಿರು ಶಾಂತಿಯುಕ್ತ ಬಣ್ಣಾ
ಮುಸಲ್ಮಾನರ ಚಿನ್ಹ
ಎಸೆವ ಸೃಷ್ಟಿದೇವಿಗಣ್ಣಾ
ನೊಸಲ ತಿಲಕವಾದ ಬಣ್ಣಾ

ಕಳೆದು ಪಾಪವಂ ಪವಿತ್ರ
ರಿಳೆಯೊಳೆಮ್ಮ ಮಾಳ್ಪುದು

ರಾಟೆ ಬಡವರೂಟವಾಗಿ
ಮೇಟಿ ಸಿರಿಯ ಕೂಟವಾಗಿ
ರಾಟೆ ಮೇಟಿಯಿಂದೆ ನಾಡಿ-
ನಾಟ ನಡೆವುದಲ್ಲವೆ ?

ಈ ನಿಶಾನೆ ನಮ್ಮ ತಾಯಿ
ಈ ನಿಶಾನೆ ನಮ್ಮ ದೇವಿ
ಈ ನಿಶಾನೆ ನಮ್ಮದಯ್ಯ
ಈ ನಿಶಾನೆ ನಮ್ಮದೋ

ಈ ನಿಶಾನೆಗಾಗಿ ಎನ್ನ
ಪ್ರಾಣವನ್ನು ಮುಡುಪನಿಡುವೆ
ಈ ನಿಶಾನೆ ನಮ್ಮ ಮೇಲೆ
ಕೊನೆಯ ತನಕ ಹಾರಲಿ!

## ರಾಷ್ಟ್ರಧ್ವಜ

ಮೂರು ಬಣ್ಣದಿಂ ಶೋಭಿಸುತಿಹ ರಾಷ್ಟ್ರಧ್ವಜವಿದು ನೋಡು
ಭಾರತ ಮಾತೆಯ ಸರ್ವಸ್ವವು ನಾವದನಂ ರಕ್ಷಿಪುದು ॥ ಅ. ಪ. ॥

ಮೇಲಿನ ಕೇಶರಿ ಸ್ವಾರ್ಥತ್ಯಾಗವ ಬಿಳುಪದು ಪಾವಿತ್ರ್ಯ
ಮೇಲಾಗಿಹ ಭಕ್ತಿಯುಸು ತೋರುವುದು ಹಸುರದು ಪ್ರತಿನಿತ್ಯ.

ರಾಟಿಯೆ ನಮ್ಮಯ ಭಾವೀ ವೈಭವದಾಶೆಯ ಸಾಧನವು
ಒಟ್ಟು ಮಾತು ಜೀವದ ಭಯವಿಲ್ಲದೆ ಮನಿಸುವುದು ನಾವು.

ಒಮ್ಮೆಲೆ ನಾವೆಲ್ಲರು ಭಾರತ ಭೂಮಾತೆಯ ಮೂರುತಿಗೆ
ಸಮ್ಮೊಳಗಿನ ಭಯಗಳನು ತೊರೆದು ಪೊಡಮಡುವಾ ನಾಡಗುಡಿಗೆ.

—ರಾ. ವೆ. ಕರಗುದರಿ

# ಸ್ವರಾಜ್ಯಧ್ವಜ

ಅಖಿಲ ಭಾರತೀಯ ಜಯಧ್ವಜಕೆ ವಿಜಯವಾಗಲಿ ॥ ಪ ॥
ನಿಖಿಲ ಲೋಕಪಾಲನೀ ಧ್ವಜಕೆ ಶುಭವನೀಯಲಿ ॥ ಅ. ಪ ॥

ಸಿಂಧು ಭದ್ರೆ ಯಮುನೆ ಗಂಗೆ ನರ್ಮದಾಶ್ರಯಧ್ವಜಂ
ವಂಧ್ಯಸೇತು ಹಿಮಗಿರೀಂದ್ರ 'ಸಾಂದ್ರಕೇಂದ್ರ ಭೂಧ್ವಜಂ.

ವಿಮಲ ಪಾರಿಜಾತ ಕಮಲ ವಿಕಸಿತಾವನೀ ಧ್ವಜಂ
ಅಮರ ಲೋಕಮಾನ್ಯ ವಿಭವ ವಿಲಸಿತಾಂಬರ ಧ್ವಜಂ.

ಹಿಂದು ಮುಸಲಮಾನ ಸಕಲರೈಕ್ಯಲಾಂಛನ ಧ್ವಜಂ
ಗಾಂಧಿ ಚರಕ ಯುಕ್ತಗುಣ ಸುವರ್ಣ ಮೋಹನ ಧ್ವಜಂ.

ಮಾನಿನೀ ಕುಲಾಭಿಮಾನ ರಕ್ಷಣಾಕ್ಷರ ಧ್ವಜಂ
ದೀನಬಾಲ ವೃದ್ಧಜಾಲ ಪಾಲನಾಕ್ಷಯ ಧ್ವಜಂ.

ಪಾರತಂತ್ರ ಬಂಧನೋಗ್ರ ಪಾಶನಾಶಕ ಧ್ವಜಂ
ಭಾರತೀ ಸ್ವತಂತ್ರ ಮಂತ್ರಘೋಷ ಪೋಷಕಧ್ವಜಂ.

—ದಿವಂಗತ ಎಂ. ಎನ್. ಕಾಮತ

# ಕನ್ನಡದ ಬಾವುಟ

ಏರಿಸಿ, ಹಾರಿಸಿ, ಕನ್ನಡದ ಬಾವುಟ!
ಓಹೊ ಕನ್ನಡ ನಾಡು, ಆಹ ಕನ್ನಡ ನುಡಿ!
ಹಾರಿಸಿ, ತೋರಿಸಿ, ಕೆಚ್ಚೆದೆಯ ಬಾವುಟ!
ಗಾಳಿಯಲಿ ಫಟಪಟ, ದಾಳಿಯಲಿ ಛಟಚಟ,
ಉರಿಯಿತೋ ಉರಿಯಿತು ಹಗೆಯ ಹಟ ಮನೆ ಮಟ,
ಹಾಳ್ ಹಾಳ್ ಸುರಿಯಿತು ಹಗೆಯ ಬೀಡಕ್ಕಟ!
ಬಾಳ್ ಕನ್ನಡ ತಾಯ್!
ಏಳ್ ಕನ್ನಡ ತಾಯ್!
ಆಳ್ ಕನ್ನಡ ತಾಯ್!
ಕನ್ನಡಿಗರೊಡತಿ ಓ ರಾಜೇಶ್ವರೀ!

ಮೌರ್ಯ ಕಳಚುರ್ಯರು, ಗಂಗರು, ಕದಂಬರು,
ರಟ್ಟರು, ಚಳುಕ್ಯರು, ಹೊಯ್ಸಳರು, ಯಾದವರು,
ಇಳೆಗೆ ಮೇಲಾದವರು, ಬಾಣರು, ಜಾಣರು,
ಕೊಲೆಯ ಕಾಳ್ಕಿಚ್ಚಿಂಗೆ ತಂಪುಮಳೆ ತಳಿದು,
ಚೆಲುವು ನೆಲ ಸಾಲುತ್ತು, ಕಲೆಯ ಹೊಂಬೆಳೆಯಿಟ್ಟು,
ನಗಿಸಿದರು ನಾಡನು, ಕರ್ದು ಕಗ್ಗಾಡನು:

## ಕನ್ನಡದ ಬಾವುಟ

ಮಾನವನ ದೇವತೆಗೆ ತಂದ ಜಿನ ಭಕ್ತರು,
ಹಂಪೆಯ ವಿರೂಪಾಕ್ಷ ಪುತ್ರರು, ವಿರಕ್ತರು,
ವೀರನಾರಾಯಣನ ಕೃಪೆಯೊಳಾಸಕ್ತರು,
ಶ್ರೀ ಗೌರಿ ಕಾವಲಿಹ ರಾಯರನುರಕ್ತರು,

ನಮ್ಮ ತಾಯ್ ಮಕ್ಕಳು–

ಬಾಳ್ ಬೆಳ್ದಿಂಗಳಲಿ ಒಲಿದು ನಲಿದವರು–
ಬೇವೊ ಬೆಲ್ಲವೊ ಬರಲಿ, ಮಲ್ಲಿಗೆಯೊ ಮುಳ್ಳೋ,
ಬಾನ ಬೆಳಕಿನಲಿ, ಮಾನದಳುಕಿನಲಿ,
ಚೆಸ್ನು ಬದುಕನು ಕುಣಿಸಿ, ಒಲಿದು ನಲಿದವರು–

ನಮ್ಮ ತಾಯಣುಗರು,

ಪಂಪನೋ, ರನ್ನನೋ, ಬಸವನೋ, ಮಾಧವನೊ,
ಆ ಅಕ್ಕಮಹದೇವಿ, ನಾರಣಪ, ಚಿಕದೇವ,
ಜಕ್ಕಣ, ಹೊನ್ನಮ್ಮ, ನಮ್ಮಮ್ಮನೆಳೆಯರು,
ಚೆಲುವ ಚೆಲುವೆಯರು—ಚಿನ್ನದ ಚಿಣ್ಣರು,
ಕಲಿಗಳು, ಕಿಡಿಗಳು, ಗಂಡರು, ಮೊಂಡರು,
ನಲಿದೊಲಿದು ಬೆಚ್ಚೊಂದು ನೆಚ್ಚಿಂಗೆ ಮೆಚ್ಚಿಂಗೆ
ಕಿಚ್ಚಿನಲಿ ಹಾಯ್ದು ನಲ್ಲನ ಹಿಡಿದ ಹೆಂಡಿರು,
ಸತಿಗಳು, ಯತಿಗಳು, ವ್ರತಿಗಳು, ಕೃತಿಗಳು,—

ಕನ್ನಡದ ಬಾವುಟವ ಹಿಡಿಯುದವರಾರು?
ಕನ್ನಡದ ಬಾವುಟಕೆ ಮಡಿಯುದವರಾರು?
ನಮ್ಮ ಈ ಬಾವುಟಕೆ ಮಿಡಿಯುದವರಾರು?
ಹೇಳಿರೋ ಹೆಸರೊಂದು ನೆನಹಿನಲಿ ಸುಳಿದಿರೆ!
ಹುಡುಕಿರೋ ಹೇಡಿ ತಾನೊಬ್ಬ ಮನೆಗುಳಿದರೆ!

ಕನ್ನಡದ ನಾಡಲಾ,
ಕನ್ನಡದ ನುಡಿಯಲಾ,

ಕನ್ನಡಿಗನೆದೆ ಕಡೆದ ತೆನೆಯಲಾ, ಕೆನೆಯಲಾ!

ಬೆಳಕು ಹರಿಯಿತು ಏಳಿ,
ಇರುಳು ಸವಿಯಿತು ಏಳಿ,
ತಾಯ ಕರೆ ಕೇಳಿ,

ಏಳಿರೋ, ಏಳಿರೋ, ಬಾಳ ಬಲಿ ಬೇಳಿರೋ
ಎಲ್ಲೊಲುಮೆಯೂ ಕೂಡಿದೊಂದುಲುಮೆ ತಾಳಿರೋ,

ತಾಯುಳಿಯೆ ನಾನುಳಿದೆ,
ತಾಯಳಿಯೆ ನಾನಳಿದೆ,

ಮನೆ ಕಾಯಿ, ತುರು ಕಾಯಿ, ನಾಡ ಗಡಿ ಗುಡಿ ಕಾಯಿ
ಕಾಯಲಾರೆಯ, ಸಾಯಿ,

ಎಂದೆಲ್ಲ ಏಳಿರೋ—

ಆಹ ಕನ್ನಡ ನುಡಿ, ಆಹ ಕನ್ನಡ ನಾಡು,
ಹಿರಿಯ ಕನ್ನಡ ಪಡೆ, ಮರಿಯ ಕನ್ನಡ ಪಡೆ,
ಏಳಿರೋ, ಬಾಳಿರೋ,

ಕನ್ನಡದ ಬಾವುಟವ ಹಿಡಿಯಿರೋ, ನಡೆಯಿರೋ'
ಏಳ್ ಕನ್ನಡ ತಾಯ್
ಬಾಳ್ ಕನ್ನಡ ತಾಯ್
ಆಳ್ ಕನ್ನಡ ತಾಯ್

ಕನ್ನಡಿಗರೊಡತಿ, ಓ ರಾಜರಾಜೇಶ್ವರೀ!

## ಕನ್ನಡದ ಬಾವುಟ

ಇಂದಿನದೆ ಹೇಳಿರೋ ಈ ನಮ್ಮ ಬಾವುಟ!
ಕುಂದಿಹುದೆ ನೋಡಿರೋ ಈ ನಮ್ಮ ಬಾವುಟ!
ಕಂದದಿದೆ ಇಂದಿಗೂ ಕನ್ನಡದ ಬಾವುಟ!
ಏನೇನ ಕಂಡುದೋ ಬಾನಾಡಿ ಬಾವುಟ!
ಆವುದನು ಕಾಣದೋ ಜೀವ ಕಳೆ ಬಾವುಟ।
ಕನ್ನಡದ ಬಾವುಟಗಳೊಂದಾದ ಬಾವುಟ!

ಏರಿಸಿ, ಹಾರಿಸಿ, ತೋರಿಸಿ, ಬಾವುಟ!
ತೇಲಾಡು, ಮೇಲಾಡು, ಓಲಾಡು, ಬಾವುಟ!
ಚೆಲುವಾಗು, ಗೆಲುವಾಗು, ಬಲವಾಗು, ಬಾವುಟ!
ಹೊನ್ನಾಗಿ, ಹಣ್ಣಾಗಿ, ಹಸನಾದ ಮಣ್ಣಾಗಿ,
ಹೊಸಹೊಸತು ಕಣ್ಣಾಗಿ, ಬೆಳಕಾಗಿ ಬೆಳೆಯಾಗಿ,
ಕೂಡುತಿಹ ಕನ್ನಡದ ಹೊಮ್ಮುಗೆಯು ಕಾವಾಗಿ,
ಪರಿಪರಿಯು ಹೊಂಬಗೆಯು ಹೆರಿಗೆಯಾ ನೋವಾಗಿ,
ನಾಲುಮುಡಿ ಕೃಷ್ಣನಾ ಕಟ್ಟೊಲುಮೆ ಹೂವಾಗಿ,
ಬಾಳು ಎಲೆ ಬಾವುಟ!
ಬಾಳ್ ಕನ್ನಡ ತಾಯ್,
ಏಳ್ ಕನ್ನಡ ತಾಯ್,
ಆಳ್ ಕನ್ನಡ ತಾಯ್,
ಕನ್ನಡಿಗರೊಡತಿ ಓ ರಾಜರಾಜೇಶ್ವರೀ!

—ಶ್ರೀ

# ಭೂಗೀತೆಗಳು

ಸರ್ವೇ ಜನಾಃ ಸುಖಿನೋ ಭವಂತು ।
ಚತುಸ್ಸಾಗರ ಪರ್ಯಂತಂ ಗೋಬ್ರಾಹ್ಮಣೇಭ್ಯಃ
ಶುಭಂ ಭವತು ॥

ಇತ್ಯಾದಿ ವೈದಿಕ ಗೀತೆಗಳು ಭಾರತೀಯರ ಪ್ರತಿನಿತ್ಯದ ಪ್ರಾರ್ಥನೆಯ ಮಂತ್ರಗಳಾಗಿವೆ. ವಿಶ್ವಕುಟುಂಬಿಗಳಾದ ಭಾರತೀಯರ ದೃಷ್ಟಿಯು ಜಾತಿ, ಜನಾಂಗ, ರಾಷ್ಟ್ರಗಳನ್ನು ಮೀರಿ ವಿಶ್ವವನ್ನೇ ವ್ಯಾಪಿಸಿ ಮಾನವ ಜನಾಂಗದ ಸುಖ-ಶಾಂತಿಗಳಿಗಾಗಿ ಹಾತೊರೆಯುತ್ತದೆ. ಭಾರತೀಯರಾದ ಕನ್ನಡಿಗರಲ್ಲಿಯೂ ಈ ದಿವ್ಯ ಶಕ್ತಿಯು ಹೇಗೆ ರೂಪುಗೊಂಡಿದೆ ಎಂಬುದನ್ನು ಈ ಕವನಗಳಲ್ಲಿ ನಾವು ಕಾಣಬಹುದು.

## ಭೂದೇವಿ

ಸ್ವಾಮಿ, ಸರ್ವೋತ್ತಮಳೆ, ಸಕಲ ಜನಕಾಧಾರೆ,
ಕಾಮಿತಾರ್ಥವ ಕೊಡುವ ಕರುಣಿ ಭೂದೇವಿ ! ॥ ಪಲ್ಲ ॥

ಹರಿಯು ಪಾದದಲುದಿಸಿ ಹರಿಗೆ ವಧುವೆಂದೆನಿಸಿ,
ಹರಿಗೆ ಸುತೆಯನು ಕೊಟ್ಟು, ಹಿರಿಯಳಾದೆ.
ಹರಿನಾಮ ಕೀರ್ತನೆಯನೊರೆವ ಧಾರಿಣಿ ನಿನ್ನ
ಮರೆಹೊಕ್ಕೆ ಮರೆಯದಿರು ಕರುಣೆ ತೋರಲನಗ.

ಶಮೆ ದಮೆಯು ಶಾಂತಿ ಸದ್ಗುಣ ಒಪ್ಪುವವು ನಿನಗೆ,
ಭ್ರಮೆಗೊಂಡು ಭೂಭುಜರು ಕಡಿದುಕೊಳುತಿಹರು.
ಅಮಿತ ಮಹಿಮಳೆ, ನಿನ್ನ ನಿಜವ ಬಲ್ಲವರಾರು ?
ತಮಗೆ ಋಣ ಇದ್ದುದನು ಕೊಂಡೊಯ್ವರು.

## ಭೂದೇವಿ

ಚಿನ್ನ ಭಂಡಾರಗಳು ನಿನ್ನೊಡಲೊಳೊಪ್ಪುವವು.
ಉನ್ನತದ ರನ್ನಗಳು ನಿನ್ನೊಳಡಗಿಹವು.
ಅನ್ನಪಾನಂಗಳಿಗೆ ಮೂಲಬೀಜವು ನೀನು;
ನಿನ್ನ ಮರೆತಿಹ ಜನಕೆ ಇನ್ನು ಸುಖವುಂಟೇ ?

ಒಬ್ಬ ರಾಯನ ಗೆಲುವೆ; ಒಬ್ಬ ರಾಯನಿಗೊಲಿವೆ;
ಒಬ್ಬ ರಾಯಗೆ ನೀನು ಹುಬ್ಬು ಹಾರಿಸುವೆ.
ಒಬ್ಬರಾದರು ನಿನ್ನ ನಿಜವನರಿತವರಲ್ಲ.
ಗರ್ಭಜಾತನ ಹರಿಯು ಕೈಲಿ ಕೊಲಿಸಿದೆಯ ?

ಅಂಬುಧಿಯೆ ವಸನಗಳು, ಕುಂಭಕುಚ ಎದೆಯು,
ಸಂಭ್ರಮದ ಹೊಳೆಕಾಲ್ವೆ ನಿನ್ನ ಹಾಲುಗಳು,
ಎಂಭತ್ತುನಾಲ್ಕು ಕೋಟಿಯ ಜೀವರಾಶಿಗಳು
ತುಂಬಿಕೊಂಡಿಹವು ಅಂಗೋಪಾಂಗದೊಳಗೆ.

ರೂಢಿ ದೇವತೆ, ನಿನ್ನ ಬೇಡಿಕೊಳ್ಳುವೆ ನಾನು
ನೋಡು ನನ್ನ ಪರಾವಲಂಬನವನು !
ನೀಡು ಬೇಗನೆ ನನ್ನ ಮನದಭೀಷ್ಟವನೆಲ್ಲ.
ಪಾಡು ಪಂತವು ಬೇಡ ಪಡೆದ ಮಗನೊಡನೆ !

ನಂಬಿದೆನು ನಾ ನಿನ್ನ ಕುಂಭಿನಿಯೆ ! ಕೈಹಿಡಿದು
ಇಂಬಾದ ಪದವಿಯನು ಸಂಭ್ರಮದಿ ಕೊಡುತ,
ಬೆಂಬಿಡದೆ ವಾರಾಹ ತಿಮ್ಮಪ್ಪನಾ ಸತಿಯೆ !
ಹಂಬಲಿಲ್ಲದ ತೆರದಿ ಸಲಹುವುದು ಜನರ.

— ವಾರಾಹ ತಿಮ್ಮಪ್ಪ

# ಎಂದು ತಿಳಿವುದೋ ಮನುಜಕುಲ !

ಎಂದು ತಿಳಿವುದೊ ಮನುಜಕುಲ ತಾನು ಒಂದೆಂದು !
ಬಿಳಿಯುವನು ಕರಿಯುವನ ತುಳಿಯುವುದು, ಯೇಹೂದ್ಯ
ತನಗೆ ದೇವರಿಗೆ ಏನೋ ಹೆಚ್ಚಿಕೆಯ ಬಾಧ್ಯ
ಇದೆ ಎನುತ ಬೀಗುವುದು, ಬ್ರಹ್ಮಮುಖದಿಂದಂದು
ಹೊರಟುಬಂದೆವು ನಾವು ನಮಗಾರು ಸರಿಯೆಂದು
ಮತ್ತೊಬ್ಬನುಬ್ಬಿ ಉಳಿದೆಲ್ಲರನು ಹಳಿಯುವುದು
ನಾವಿಂತು ಒಂದೊಂದು ಡಂಭದಲಿ ಕೊಳೆಯುವುದ
ಎಂದು ಬಿಡುವೆವೊ ಜಗನ್ನಾಯಕನ ಕೃಪೆ ಸಂದು.
ಬಿಸಿಲಿನಲಿ ಮಲಗಿರುವ ತಾಯಮೊಲೆಯೆಡೆ ಸೇರಿ,
ಎರಡು ಕಣ್ತೆಗೆದ, ಒಂದನು ತೆರೆದ, ಒಂದನೂ
ತೆರೆಯದಿಹ ನಾಯಿಮರಿ, ಹುಟ್ಟಿದೆರಡನೆಯ ದಿನ,
ಒಂದರೊಡನೊಂದು ಕಚ್ಚಾಡಿ, ಹೋಗೊ ಭಿಕಾರಿ,
ಹೋಗೋ ಬೆರಕೆ, ತೊಲಗು ನಾಯಲ್ಲ ಹಂದಿ ನೀ,
ಎಂದು ಕಾದುವ ತೆರದೆ ಕಾದುತಿದೆ ಜಗದ ಜನ.

—ಶ್ರೀನಿವಾಸ

# ಅಭೀಃ

ಕಾಡ ಮೌನವ ಸೀಳಿ ಹಬ್ಬುತಿದೆ ಕೇಳುತಿದೆ
ಬಿತ್ತರದ ದಿಕ್ತಟಗಳಡ್ಡಿ ದಾಟುತಿದೆ !
ಉಳಿದೆಲ್ಲ ನುಡಿಗಳನು ಮುಳುಗಿಸುತೆ ಮೊಳಗುತಿದೆ
ಬಾಳ ಹೆದ್ದಾರಿಯನು ಹಿಡಿನೆತ್ತಿ ತೋರುತಿದೆ
—ಅಭೀಃ! ಅಭೀಃ! ಅಭೀಃ! ಎಂಬಮೃತವಾಣಿಯಿಂದು
ಮೂವತ್ತು ಶತಮಾನಗಳ ಮೆಟ್ಟಿ ಕೇಳುತಿದೆ
ಕಾಲದಾ ಕರೆಯಂಚಿನಾಚೆಯಿಂದ.

ಯಜ್ಞಶಾಲೆಗಳಿಂದ ಬಲಿಯಿಂದ ಸೆರೆಯಿಂದ
ತೊಂಡು ಮಲೆತೆಲ್ಲವನು ತುಳಿದತ್ತಣಿಂದ
ಕಲ್ಲುಗಾಣಗಳಿಂದ ಸಿಲುಬೆಗಳ ನೋವಿಂದ
ವಿಷಪಾತ್ರೆಯೊಡಲಿಂದ ಸುಡುವುರಿಯ ಮಡಿಲಿಂದ
—ಅಭೀಃ! ಅಭೀಃ! ಅಭೀಃ! ಎಂಬ ನುಡಿ ಏಳುತಿದೆ
ಹೇಡಿತನದಳುಕುಗಳ ಓಡಿಸಿದೆ ಚೆದರಿಸಿದೆ
ವೀರಸಂಜೀವನವ ಊಡಿಸುತಿದೆ!

ಬಲಹೀನರೆಂದೆತ್ತಲಾತ್ಮವನು ಗಳಿಸಿದರು ?
ಬಲಕಾಗಿ ಕಾಯ್ವವರು ಏಗೈವರು ?
ಚಲಮೊತ್ತ ಅಧಿಕಾರದಂಡಲೆಗೆ ಬೆದರುವರು
ಎಂದೇನ ಸಾಧಿಸುವರೆಂದೆಮ್ಮ ಕೇಳುತಿದೆ
—ಅಭೀಃ! ಅಭೀಃ! ಅಭೀಃ! ಎಂಬ ಸಗ್ಗದ ಬಿತ್ತು
ನರರ ಎದೆವೊಲಗಳಲಿ ಬೇರಿಟ್ಟು ಮೊಳೆಯುತಿದೆ!
ಬಲದ ತಿರುಳನು ಬಲಿಸಿ ಬೆಳೆಸುತ್ತಿದೆ!

ನಿಲ್ಲಿಸದು ಕೂಡಿಸದು ಮಲಗಿಸದು ಕೆರಳಿಪುದು
ಆಡುವಾಟದ ನಡುವೆ ಕೂಟಗಳ ನಡುವೆ!
ಆಸರಲಿ ಕಣ್ಣೆವೆಯು ಮುಚ್ಚೆ ಬರುತಿರಲತ್ತ
ಹೊಸತವಕದೊತ್ತಿನಲಿ ಮೇಲೆತ್ತಿದೆ!
—ಅಭೀಃ! ಅಭೀಃ! ಅಭೀಃ! ಇದೆ ಮಂತ್ರವೆನ್ನುತ್ತೆ
ಎಂಟು ದಿಕ್ಕಿನ ಗಾಳಿಗುಸಿರೆತ್ತಿ ಊದುತಿದೆ!
ನೀಳ್ಗೊರಲ ತುತ್ತೂರಿಯನೂದಿಸುತಿದೆ!

ಯುಗದಗಲ ಜಗದಗಲ ಎಡರೆದ್ದು ನಿಂತಾವು!
ಸಂರಾಜದಬ್ಬರವು ನಡುಗಿಸೀತು!
ಕುಲವೆಂಬ ಮತವೆಂಬ ಕೆಳೆಯೆಂಬ ನಾಡೆಂಬ
ಮಮತೆಗಳು ದಾರಿಯಲಿ ಕತ್ತಲಿಟ್ಟಾವು!
—ಅಭೀಃ! ಅಭೀಃ! ಅಭೀಃ! ಎಂಬ ಧ್ರುವ ತಾರಗೆಯು
ಕತ್ತಲಲಿ ತವಿಲಲ್ಲಿ ದಿಕ್ಕನ್ನು ಕಾಣಿಪುದು
ನಿಜಕಿಟ್ಟ ಮುಸುಕೆತ್ತಿ ಮರೆ ತೆರೆವುದು

ಮಣಿಯದಿಹ ಮನವೊಂದು ಸಾಧಿಸುವ ಹಟವೊಂದು
ನಿಜದ ನೇರಕೆ ನಡೆವ ನಿಶ್ಚಲತೆಯೊಂದು—
ಅನ್ಯಾಯಕೆಂದೆಂದು ಬಾಗದೆಚ್ಚರವೊಂದು
ಮರುಕಕ್ಕೆ ಪ್ರೇಮಕ್ಕೆ ಚಿರ ತೆರೆದ ಎದೆಯೊಂದು
—ಅಭೀಃ! ಅಭೀಃ! ಅಭೀಃ! ಎಂಬ ತಾರಕ ವಾಕ್ಯ
ನಾಡಿಯನು ನಡಸುತಿರೆ, ಬಾಳನ್ನು ತಿದ್ದುತಿರೆ
ನಡೆ ಮುಂದಕೆನ್ನುತ್ತೆ ಕೂಗುತಿವೆ ನುಗ್ಗಿಸುತಿವೆ.

—ವಿ. ಸೀ

# ಮಂಗಲ

ಧಾಟಿ: ‘ ಶ್ರೀಹರೇ ಶೌರೇ ಪಾಹಿ ’

ಶಾಂತಿಯು ದಿಗಂತದಿ ವಿಶ್ರಾಂತಿಯನು ತಾಂ ತಳೆದು ।
ಸಂತತಾನಂತ ಸಂತೋಷ ಫಲಿಸಲಿ ।
ದೇವಾದಿ ದೇವನಾಶೀರ್ವಾದದೀ ॥

ಜನಪದಭಿಮಾನವೆ ಸಿಂ । ಹಾಸನ ಶಾಸನ ಕಾರಣ ।
ಜನಸೇವಕಗಣಮಣಿಭೂಷಣವಾಭರಣ ।
ಜನಧರ್ಮವೆ ಶಿರಸ್ತ್ರಾಣ ॥

ಜನರಾಶ್ವಸನ ಪ್ರಾಣ । ಘನಭಾಗ್ಯೋದಯದ ನವ ।
ವಿಭವದ ಯುಗಕೆ ಕಾರಣ ।
ಭಾಗ್ಯವಿಧಾತಾ ನಾಶೀರ್ವಾದದೀ ॥

ವೀರಭಟರ ನಾಡಿದೀ । ಭಾರತದಿ ನೃಕೇಸರಿ ।
ತೋರು ಸದಾ ವಿಜಯ ಸನಾತನ ಧರ್ಮಕೆ ಶ್ರೀಹರಿ ॥

—ದಿವಂಗತ ಎಂ. ಎನ್. ಕಾಮತ

# ರಾಷ್ಟ್ರಗೀತೆಗಳು

ಭಾರತ

ಇಂಗ್ಲೆಂಡ್

ಪೋಲಂಡ್

ಫಿನ್‌ಲಂಡ್

ನಾರ್ವೆ

ಗ್ರೀಸ

ಜಪಾನ

# ರಾಷ್ಟ್ರಗೀತೆಗಳು

ಎಲ್ಲ ರಾಷ್ಟ್ರಗಳ ರಾಷ್ಟ್ರಗೀತೆಗಳನ್ನು ಸಂಗ್ರಹಿಸಬೇಕೆಂದು ನಮ್ಮ ಬಯಕೆಯಿದ್ದಿತು. ಆದರೆ ನಮಗೆ ದೊರೆತಷ್ಟನ್ನೆ ಉಪಯೋಗಿಸುವ ಪ್ರಸಂಗ ಬಂದಿತು. ನಮ್ಮ ರಾಷ್ಟ್ರೀಯ ಗೀತೆಗಳೊಡನೆ ಅವುಗಳನ್ನು ಹೋಲಿಸಿ ನೋಡಬಹುದು.

# ಭಾರತ ರಾಷ್ಟ್ರಗೀತೆ

'ವಂದೇಮಾತರಂ' ಮಂತ್ರದ ದ್ರಷ್ಟಾರರು ವಂಗಕವಿಪುಂಗವರಾದ ಬಂಕಿಮ ಚಂದ್ರರು. **ಆನಂದಮಠದ ಕಾದಂಬರಿಯಲ್ಲಿಯ ಕವಿತೆಯಿದು. ಈ ಕವಿತೆಯನ್ನು** ಬರೆದೊಡನೆಯೇ ಇದು ಭಾರತದ '**ರಾಷ್ಟ್ರಗೀತೆ**'ಯೆಂದು ಒಳದನಿಯೊಂದು ದನಿಗೊಟ್ಟಿತು. ಇಂದು ಭಾರತದ ರಾಷ್ಟ್ರೀಯ ಗೀತೆಯಾಗಿ ೪೦ಕೋಟಿ ಭಾರತೀಯರಲ್ಲಿ ಹುಮ್ಮಸವನ್ನು ಹರಡುತ್ತಲಿದೆ.

**—ವಂದೇಮಾತರಂ—**

ವಂದೇ ಮಾತರಂ । ವಂದೇ ಮಾತರಂ ॥
ಸುಜಲಾಂ ಸುಫಲಾಂ ಮಲಯಜ ಶೀತಲಾಂ ॥
ಶಸ್ಯಶಾಮಲಾಂ ಮಾತರಂ । ವಂದೇ ಮಾತರಂ

ಶುಭ್ರಜ್ಯೋತ್ಸ್ನಾ ಪುಲಕಿತಯಾಮಿನೀಮ್ ।
ಫುಲ್ಲಕುಸುಮಿತ ದ್ರುಮದಲ ಶೋಭಿನೀಮ್ ।
ಸುಹಾಸಿನೀಮ್, ಸುಮಧುರ ಭಾಷಿಣೀಮ್ ।
ಸುಖದಾಂ ವರದಾಂ ಮಾತರಂ ॥ ವಂದೇ ॥

## ಇಂಗ್ಲೆಂಡ್

ಏನ ಮಾಡಿದೆ ನಾನು ನಿನಗೆ
ಇಂಗ್ಲೆಂಡ್, ನನ್ನಿಂಗ್ಲೆಂಡ್ !
ಏನ ಮಾಡೆನು ಹೇಳು ನಿನಗೆ
ನನ್ನ ಇಂಗ್ಲೆಂಡ್ !
ದೇವನೊರೆವುದ ಕೇಳಿ,
ಕಣ್ಣು ಮಿನಗನು ತಾಳಿ,
ಘೋರಯಜ್ಞವ ಬೇಳಿ,
ಗಾನದಲಿ ತುತ್ತೂರಿಯ ನೀನೂದಲು,
ಇಂಗ್ಲೆಂಡ್,
ಇಳೆಬಳಸಿ ತುತ್ತೂರಿಯ ನೀನೂದಲು.

## ಇಂಗ್ಲೆಂಡ್

ಇನ್ನು ರವಿ ಎಲ್ಲಿ ಕಾಣುವನು,
ಇಂಗ್ಲೆಂಡ್, ನನ್ನಿಂಗ್ಲೆಂಡ್,
ನಿನ್ನೆಣೆಯ ಮಹತುಕಾರ್ಯವನು,
ನನ್ನ ಇಂಗ್ಲೆಂಡ್ !
ಎಲ್ಲಿ ನಲಿವನು ಕಂಡು
ನಿನ್ನ ಧೀರರ ದಂಡು
ನೂಂಕುವೊಲು ಮುಂಕೊಂಡು,
ಗಾನದಲಿ ತುತ್ತೂರಿಯು ನೀನೂದಲು
ಇಂಗ್ಲೆಂಡ್,
ಎಡರಿನಲಿ ತುತ್ತೂರಿಯು ನೀನೂದಲು !

ಬಳುಕುವೆವೆ ಭಕ್ತಿಯಲಿ ನಾವು
ಇಂಗ್ಲೆಂಡ್, ನನ್ನಿಂಗ್ಲೆಂಡ್ !
ಕೊಳು, ಕೊಲಿಸು; ನಿನ್ನವರು ನಾವು,
ನನ್ನ ಇಂಗ್ಲೆಂಡ್ !
ನಿನ್ನ ಹೊಲ, ಮನೆ, ಚೆಂದ;
ಬಾಳು ಮಿಗಿಲಾನಂದ;
ಸಾವಳಿವು—ಸಾಯುವೆವು
ಗಾನದಲಿ ತುತ್ತೂರಿಯು ನೀನೂದಲು,
ಇಂಗ್ಲೆಂಡ್,
ಸ್ವರ್ಗದಲಿ ತುತ್ತೂರಿಯು ನೀನೂದಲು.

ಗರ್ವಿ, ಘಾತಕಿ, ಎಂಬರಮ್ಮ,
　　ಇಂಗ್ಲೆಂಡ್, ನನ್ನಿಂಗ್ಲೆಂಡ್ !
ಸರ್ವಧರೆ ನಿನ್ನ ಹೊರೆಯಮ್ಮ !
　　ನನ್ನ ಇಂಗ್ಲೆಂಡ್ !
ವಜ್ರಕವಚವ ತೊಟ್ಟು,
ಗತಿಯ ಕಾವ್ಪದ ಬಿಟ್ಟು,
ಜರುಗುವೆಯ ? ಮರುಗುವೆಯ ?
　　ಗಾನದಲಿ ತುತ್ತೂರಿಯ ನೀನೂದದೆ,
　　　　ಇಂಗ್ಲೆಂಡ್,
　　ನರಕದಲಿ ತುತ್ತೂರಿಯ ನೀನೂದದೆ ?

ತುಳಿದುಬಹ ನಾವೆಗಳ ತಾಯಿ,
　　ಇಂಗ್ಲೆಂಡ್ ನನ್ನಿಂಗ್ಲೆಂಡ್ !
ಹಳೆಯುಗ್ರಸಾಗರನ ಕೆಳದಿ,
　　ನನ್ನ ಇಂಗ್ಲೆಂಡ್ !
ಸ್ವಾಮಿಯುಕ್ಕರ ಕುವರಿ,
ಧರ್ಮಖಡ್ಗದ ಮಡದಿ—
ಸೀಳಿರದೆ, ಖೂಳರೆದೆ,
　　ಗಾನದಲಿ ತುತ್ತೂರಿಯ ನೀನೂದಲು
　　　　ಇಂಗ್ಲೆಂಡ್,
　　ಸತ್ಯದಲಿ ತುತ್ತೂರಿಯ ನೀನೂದಲು !

—ಶ್ರೀ

HENLEY: What have I done for you, England, my England.

## ಪೋಲಂಡ್‌ದ ರಾಷ್ಟ್ರಗೀತೆ

ಈ ರಾಷ್ಟ್ರಗೀತೆಯು ಚಿಕ್ಕದಾದರೂ ಅರ್ಥಪೂರ್ಣವಾಗಿದೆ. ಪೋಲಂಡದ 'ಸ್ಕ್ಯಾಯನ' ಎಂಬ ಸೇನಾಪತಿಯು ೧೮೩೦-೩೧ರಲ್ಲಿ ರಶಿಯದೊಡನೆ ನಡೆದ ಯುದ್ಧದಲ್ಲಿ ಈ ಗೀತೆಯನ್ನು ಬರೆದನು. ಅದು ಇಂದಿಗೂ ಪೋಲರಿಗೆ ತಾರಕಮಂತ್ರವಾಗಿದೆ.

ಪೋಲಂಡು ಆಳು ಉಳಿದೀತೆ
ನಾವೆಲ್ಲ ಬಾಳಿ ಇರುವಾಗ!
ಅದು ಏನ ಕಳೆದು ಕೊಂಡೀತೋ
ದೃಢಬಾಹು ಗಳಿಸಿ ತಂದೀತು.
ನಡೆ ನಡಿಯಿರಿನ್ನು ಬಿಡುಗಡೆಗೆ
ಸಂಕೋಲಿ ಕಳಚಿ ಈ ಕಡೆಗೆ
ಪೋಲಂಡು ಮುಕ್ತವಿಹ ಕೊನೆಗೆ.

—ದ. ರಾ. ಬೇಂದ್ರೆ

# ಫಿನ್‌ಲಂಡ್‌ದ ರಾಷ್ಟ್ರಗೀತೆ

ಫಿನ್ನರ ವೀರ್ಯ, ರಣೋತ್ಸಾಹಗಳು ಇದರಲ್ಲಿ ಪ್ರಕಟವಾಗಿವೆ. ಈ ರಾಷ್ಟ್ರಗೀತೆಯನ್ನು 'ರುನೆಬರ್ಗ' ಎಂಬ ಕವಿಯು ಬರೆದಿದ್ದಾನೆ.

ನಮ್ಮ ನಾಡು ನಮ್ಮ ನಾಡು ನಮ್ಮ ತಂದೆ-ನಾಡು ।
ಈ ಹಾಡು ದಿಗ್ ದಿಗಂತ ಕೇಳುವಂತೆ ಮಾಡು ॥

ಇಲ್ಲಿಯ ಬೆಟ್ಟದ ಎತ್ತರ
ಈ ಕಣಿವೆಯು ಈ ಇಳುಕಲು ಈ ಬಯಲಿನ ಈ ಬಿತ್ತರ
ಎಲ್ಲಿಯೂ ಇಲ್ಲ । ಎಲ್ಲಿಯೂ ಇಲ್ಲ ॥

ಏನಂದವೋ ಈ ಬಡಗಣ ನಾಡಿನ ಚಂದ
ನಮ್ಮೀ ತಾತಂದಿರ ನಾಡನು ಬಲ್ಲವ ಬಲ್ಲ
ಮುಂದಾಗಲಿ ಮಯಿ ಮಯ್ಯ ಎದೆ-ಕೋಟೆಯ ಕಟ್ಟಿ
ಬಂದಿತು ಬಿಡುಗಡೆ ಹಾದಿಯು ಎಲ್ಲಿಂದಲೋ ಹುಟ್ಟಿ ॥

ಫಿನ್ನರು ಬಿಡುಗಡೆಗಾಗಿಯೇ ಹೋರಾಡರು ಎಂದು
ಸಾರದಿರಲಿ ಈ ಜಗದಲಿ ಯಾರೂ ಎಂದೆಂದೂ ॥

—ದ. ರಾ. ಬೇಂದ್ರೆ

# ನಾರ್ವೆಯ ರಾಷ್ಟ್ರಗೀತೆ

ಇದು ಆದರ್ಶ ರಾಷ್ಟ್ರಗೀತೆಯೆಂದು ಹೇಳಬಹುದು. ಇದನ್ನು ಬರೆದವರು 'ಬ್ಜೇರೆಗಾರ್ಡ' ಎಂಬ ನಾರ್ವಿಕರು.

ಸಜ್ಜನ ನಾರ್ವೇ ದೇಶದ ಮಕ್ಕಳೆ।
ಹಾಡಿರಿ ಹುಮ್ಮಸದೀ ಹಾಡು ॥ ಪಲ್ಲ ॥

ನೀವು ಸ್ವತಂತ್ರರು ಬಾಳಿರಿ ಆಳಿರಿ
ಎಂದೂ ತಲೆಯೆತ್ತಿ।
ಬಾಗಿದರೀ ತಲೆ ನಾಡಿಗೆ ಬಾಗಲಿ
ಇರಲದಕದು ದತ್ತಿ ॥

ಜಯ ಜಯ ಎನ್ನಿ
ವೀರರೆ ಬನ್ನಿ ।
ನಾಡಿನ ಮಕ್ಕಳು ನಾಡಿಗೆ ತಕ್ಕರು
ಅಕ್ಕರೆ ಮಿಗಿಲೆನಿಸಿ॥

ಎದೆ ಹೆದೆಯೇರಿಸಿ
ಮೊಗ ಸೊಗಬೀರಿಸಿ
ಸ್ವಾತಂತ್ರ್ಯದ ಸ್ವರ ಹರಿಯಲಿ ಹಾರಲಿ
ನಿಮ್ಮುರದೊಳು ಧ್ವನಿಸಿ॥

ಮೋಡದ ಮುಸುಕಿನ, ಮಂಜಿನ ಶಿಖರದ
ಬೆಟ್ಟದ ಸಾಲಿನದೀನಾಡು ।
ಹಸಿರಿನ ಕಣಿವೆ ಬೆಳೆಗಳ ಬಣಿವೆ
ಮೀನಿನ ಕಡಲದಕಿದೆ ಜೋಡು ॥

ನಾಡೆ ! ನಂಬಿದೆ ನಚ್ಚಿದೆ ನಿನ್ನನು
ಈ ಜನ ಎಂದೆಂದೂ ।
ಸೇನಾಣತಿಗೊಡು ಮೈ ಮುಡುಪಿಡುವುದು
ಈ ಜನ ಒಂದೊಂದು ॥

ತಾಯ್ಗಳ ತಾಯೇ
ನಿನ್ನನು ಕಾಯೇ
ಬದ್ಧರು ನಾಪಿಹೆವು॥
ಈ ತೀರಕೆ ತೆರೆ ತಾಗುವವರೆಗೂ
ಎಲ್ಲರಿಗೂ ಮಿಗಿಲಾಗುವವರೆಗೂ
ರಣದೊಳು ಸಾಯೇ
ಸಿದ್ಧರು ನಾಪಿಹೆವು॥

—ದ ರಾ. ಬೇಂದ್ರೆ

# ಗ್ರೀಸ್‌ದ ರಾಷ್ಟ್ರಗೀತೆ

ಈ ರಾಷ್ಟ್ರಗೀತೆಯು ಮೂಲ ಗ್ರೀಕ ಭಾಷೆಯಿಂದ ಮಿಸೆಸ್ ಎಸ್. ಜಿ. ಕಾನೊಟ್ಸಿಸಳು ಇಂಗ್ಲೀಷಿಗೆ ಭಾಷಾಂತರಿಸಿದ್ದಾಳೆ.

೧

ಜಯು ಜಯು ಸ್ವಾಧೀನತೆಗೆ ಜಯು ಜಯೂ
ಸ್ವಾಗತ ಸ್ವಾಧೀನತೆ
ಶೂರರ ಎದೆ ನೆತ್ತರದಲಿ ಮೊಳೆತೂ
ಹಬ್ಬಿದೆ ಮುಕ್ತಾಲತೆ।
ರಣದಲಿ ಕುಣಿಯುವ ಖಡ್ಗದ ಧಾರೆಗೆ
ನಿನ್ನಾ ಕಣ್ಮಿಂಚಿದೆ
ಮುಡುಪಿದ ಮುಯಿಗಳ ಬೆನ್ನೆಲುಬಿನ ಆ
ವಜ್ರದಿ ನೀ ಹೊಂಚಿದೆ ॥

೨

ತಗ್ಗಿ ನೀನು ಸಿಗ್ಗಾಗಿ ಮೌನದಲಿ
ಮುಸುಕಿನಲ್ಲಿ ಕಾದಿರೆ
'ಬಾ ಮತ್ತೊಮ್ಮೆ' ಎನುತ ಇನ್ನೊಮ್ಮೆ
ಬರುವುದೊ ಶೂರರ ಕರೆ

ನೀನೆನುತಿದ್ದೆ ಆದರೆ ನಿದ್ದೆ
ಆಯಿತು ಮಕ್ಕಳ ಸೆರೆ
ಕತ್ತಲೆ ಕತ್ತಲು ನಾಡಿನೊಳೆತ್ತಲು
ದಾಸ್ಯದ ಮಸಣದಾನೆರೆ ॥

೩

ಗತವೈಭವವನೆ ನೆನೆವುದು ನಿನಗದು
ದಿನಬಳಕೆಯದಾಗಿದೆ
ಹಿಂದಿನ ಕಥೆಯನು ಹಿಗ್ಗಿಲೆ ಹೇಳುತ
ಕೊನೆಗಳುವುದು ಸಾಗಿದೆ।
ತಾಳಿದೆ ತಡೆದೆಯೇ ಬಿಡುಗಡೆ ಬಾಂಧವ
ಬರದಿರೆ ನೀ ಬೆಚ್ಚಿದೆ
ಕಂಡಿಕೊಂಡೆ ಕೈ ಹೊಟ್ಟೆಯ ಕಿಚ್ಚಿಗೆ
ಮುಂಗೈ ನೀ ಕಚ್ಚಿದೆ ॥

೪

ಕರೆದಾರೇ ಯಾರಾರೇ ಎನ್ನುತ
ನೀ ಕಾಡನು ಹೊಕ್ಕಿರೆ
ಸಂಕಲೆ ಸಪ್ಪುಳ ಕೆರಳಿದ ಸರಳಿಕೆ
ಬರಿ ಇದೆ ಕೇಳಿಸುತಿರೆ।
ಎತ್ತಿದೆ ಮೊಗವನು ನೆತ್ತಿಯ ಸೂರ್ಯಗೆ
ಸುರಿಸಿದೆ ಕಣ್ಣೀರ್‌ಮಳೆ
ಆದನೊರೆಸಲು ಹಾತೊರೆಯುತ ಬಂದಿತು
ಗ್ರೀಕರ ಕೆನ್ನೀರ್ ಹೊಳೆ ॥

—ದ. ರಾ. ಬೇಂದ್ರೆ

# ಜಪಾನ್‌ದ ರಾಷ್ಟ್ರಗೀತೆ

ಭೂಮಿ ಭಂಗವಾದರೇನು ?
ಬಾನೇ ಕಡಿದು ಬಿದ್ದರೇನು ?
ನೆಲಜಲ ಒಂದಾದರೇನು ?

ಒಂದೆ ಮಾತು ಬಲ್ಲವೆಲ್ಲ ಧೀರಶೂರರೆದೆಗಳು
ಇದು ಶಾಶ್ವತ, ಇದು ಪವಿತ್ರ, ನಿರ್ಮಲವಾವಾಗಲೂ
ಪ್ರಳಯಕು ಅವಿಭಾಜ್ಯವು
ನಮ್ಮೀ ಸಾಮ್ರಾಜ್ಯವು.

— ದ. ರಾ. ಬೇಂದ್ರೆ

# ಭದ್ರಂ! ಶುಭಂ! ಮಂಗಳಂ!!

ಆವಳ್ಪ್ರಾಗ್ವಧುಪಿಂದೆ ಮಾನಿತಳು ಸೇವಾನಂದ ಚಿತ್ಸೌಖ್ಯಮಂ
ಆವಳ್ಗಂಗ ಕದಂಬ ಸಲ್ಕಿಯುದು ರಟ್ಟಪೊಯ್ಸಳರ್ಗಿತ್ತು ಸ-।
ದ್ಭಾವಾತೀತ ವಿಚಿತ್ರ ಶಿಲ್ಪಕಲೆಯಿಂ ಸಾಹಿತ್ಯ ಸಂಪತ್ತಿನಿಂ
ದಾವಳ್ಶೋಭಿಪಳಾ ಧರಿತ್ರಿಗನಿಶಂ ಭದ್ರಂ! ಶುಭಂ! ಮಂಗಳಂ!

ನಿನ್ನೊಳು ಜನ್ಮವೆತ್ತಲಿರೆ ನಿನ್ನಯ ನಾಡಿನೊಳಾಡೆ ಇಂಬಿನಿಂ
ಕನ್ನಡವಾಣಿಯಾದರದಿ ನಿನ್ನಯ ವಾಙ್ಮಯ ವಾರಯಲ್ಕರಂ।
ನಿನ್ನನು ನೇಹದಿಂ ನೆನೆದು ಕೀರ್ತಿಸೆ ನಿನ್ನಯ ಸೇವೆಗೈಯ್ಯಲೀ
ಜನ್ಮವು ಜನ್ಮವಲ್ತದುವೆ ಧರ್ಮದ ಮರ್ಮವದೆಲ್ತೆ ಮಾತೆಯೇ ॥

ಜಯವಂ ಪಾಲಿಸು ಸತ್ಯವಂ ನುಡಿಸು ಸಂತಾನಕ್ಕೆ ಸತ್ಸೇವೆಯಂ
ಬಯಸಲ್ಬುದ್ಧಿಯ ನೀಡು ನಾಡಜನರೊಳ್ಭೇದಂಗಳೀಡಾಡು ।
ಶಾಂತಿಯನೆಲ್ಲೆಲ್ಲಿಯು ಬೀರು ಧರ್ಮಪಥಕಂ ಕೈದೋರು ಮನ್ಮಾತೆ ಶ್ರೀ
ಜಯಕರ್ನಾಟಕ ದೇವಿ ನೀಡು ಭರದಿಂ ಸ್ವರ್ಲೋಕ ಸ್ವಾರಾಜ್ಯಮಂ ॥

–ಭಾರತಿ